KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಫೆಬ್ರವರಿ ೧, ೨೦೦೭ (ಮಾಘ ೧೨, ಶಕ ವರ್ಷ ೧೯೨೮) | ಸಂಚಿಕೆ ೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾಧಿಕಾರಿಯವರ ಕಾರ್ಯಾಲಯ, ಮಡಿಕೇರಿ, ಕೊಡಗು ಜಿಲ್ಲೆ**
**ಅಧಿಕೃತ ಜ್ಞಾಪನಾ ಪತ್ರ**
**ಇಎಸ್‌ಟಿ(1) 224/ 06-07, ದಿನಾಂಕ:30ನೇ ಡಿಸೆಂಬರ್, 2006**

**ವಿಷಯ:** ಗುತ್ತಿಗೆ ಆಧಾರದಲ್ಲಿ ತಜ್ಞ ವೈದ್ಯರು/ ಸಾಮಾನ್ಯ ಕರ್ತವ್ಯ ವೈದ್ಯರು ಮತ್ತು ಭಾರತೀಯ ವೈದ್ಯ ಪದ್ಧತಿ ವೈದ್ಯರನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1. ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಪತ್ರ. ಸಂಖ್ಯೆ: ಆಕುಕ/ ಹೆಚ್‌ಎಸ್‌ಡಬ್ಲ್ಯೂ/ 120/ ಪಿಆರ್ ಸಕ್ರೆಟರಿ/ 2005 ದಿನಾಂಕ:15.07.2005.

2. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ:29.12.2006 ರಂದು ನಡೆದ ಗುತ್ತಿಗೆ ಆಧಾರದ ತಜ್ಞ ವೈದ್ಯರ ಮತ್ತು ಸಾಮಾನ್ಯ ಕರ್ತವ್ಯ ವೈದ್ಯರ ಮತ್ತು ಐಎಸ್‌ಎಂ ವೈದ್ಯರ ನೇಮಕಾತಿಗೆ ಸಂದರ್ಶನ ನಡೆಸಿದ ಸಭೆಯ ನಡಾವಳಿ.

ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಉಲ್ಲೇಖಿತ (1)ರ ಪತ್ರದಂತೆ ಕೊಡಗು ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರ ಅಧೀನದಲ್ಲಿ ಬರುವ ಆಸ್ಪತ್ರೆಗಳಲ್ಲಿ ಖಾಲಿ ಇರುವ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ/ ಮುಂದಿನ ಆದೇಶದ ವರೆಗೆ/ ನೇರ ನೇಮಕಾತಿಯಿಂದ ತುಂಬುವವರೆಗೆ/ ವರ್ಗಾವಣೆ ತುಂಬುವ ವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯ ವರೆಗೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಎಂಬಿಬಿಎಸ್ ಪದವೀಧರರಿಗೆ ಮಾಸಿಕ ರೂ.11.000/-(ಹನ್ನೊಂದು ಸಾವಿರ ಮಾತ್ರ) ಮತ್ತು ಐಎಸ್‌ಎಂ ಪದವೀಧರರಿಗೆ ಮಾಸಿಕ ರೂ.6.000/- (ಆರು ಸಾವಿರ ಮಾತ್ರ) ದಂತೆ ತುಂಬಲು ಅವಕಾಶವಿರುತ್ತದೆ. ಅದರಂತೆ ದಿನಾಂಕ:29.12.2006 ರಂದು ನಡೆಸಿದ ಸಂದರ್ಶನಕ್ಕೆ ಹಾಜರಾದ ಅಭ್ಯರ್ಥಿಗಳ ಪೈಕಿ ಈ ಕೆಳಕಂಡ 10 ಅಭ್ಯರ್ಥಿಗಳನ್ನು ಮೀಸಲಾತಿ ನಿಯಮದಂತೆ ಮತ್ತು ಈ ಕೆಳಕಂಡ ಶರತ್ತುಗಳಿಗೆ ಒಳಪಟ್ಟು ಹಾಗೂ ಸರ್ಕಾರವು ಆಗಿಂದಾಗ್ಗೆ ಹೊರಡಿಸುವ ನಿಯಮಗಳಿಗೊಳಪಟ್ಟು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ಆರೋಗ್ಯ ಕೇಂದ್ರಗಳಿಗೆ ಎಂಬಿಬಿಎಸ್ ಪದವೀಧರರಿಗೆ ಮಾಸಿಕ ರೂ.11.000/- ಮತ್ತು ಐಎಸ್‌ಎಂ ಪದವೀಧರರಿಗೆ ಮಾಸಿಕ ರೂ.6.000/- ದ ಸಂಭಾವನೆಯೊಂದಿಗೆ ಗುತ್ತಿಗೆ ಆಧಾರದ ಮೇಲೆ ಕೇವಲ ತಾತ್ಕಾಲಿಕ ಸೇವೆಯಲ್ಲಿ ನೇಮಕ ಮಾಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ | ನೇಮಕ ಮಾಡಿದ ಸ್ಥಳ |
|---|---|---|---|
| | **ಎಂಬಿಬಿಎಸ್ ಪದವೀಧರರು** | | |
| 1. | ಡಾ॥ ಕಟ್ಟೇರ ವಿಶ್ವನಾಥ್ ಭಾಗ್ಯ, D/o ಕಟ್ಟೇರ ಎ.ವಿಶ್ವನಾಥ್, ಟಿ. ಶೆಟ್ಟಿಗೇರಿ ಗ್ರಾಮ ಮತ್ತು ಅಂಚೆ, ಕೊಡಗು ಜಿಲ್ಲೆ. | ಸಾಮಾನ್ಯ ವರ್ಗ | ಸ.ಆ.ಕೇಂದ್ರ ಗೋಣಿಕೊಪ್ಪ (ತಜ್ಞ ವೈದ್ಯರ ಹುದ್ದೆಯ ಎದುರು) |
| 2. | ಡಾ॥ ಬೋಜಮ್ಮ ಕೆ.ಎಂ. ಕೂರ್ಗ ಹೆಲ್ತ್ ಕೇರ್ ಸೆಂಟರ್ ಗೋಣಿಕೊಪ್ಪ. | ಸಾಮಾನ್ಯ ವರ್ಗ | ಸ.ಆ.ಕೇಂದ್ರ ಗೋಣಿಕೊಪ್ಪ (ತಜ್ಞ ವೈದ್ಯರ ಹುದ್ದೆಯ ಎದುರು) |
| | **ಭಾರತೀಯ ವೈದ್ಯ ಪದ್ಧತಿಯ ಪದವೀಧರರು** | | |
| 3. | ಡಾ॥ ವೀರಣ್ಣ ಬಸಯ್ಯ, ಮಠಪತಿ, D/o ಬಿ.ಜಿ. ಮಠಪತಿ (ಶಿಕ್ಷಕರು) ದರ್ಮಪುರ ಅಂಚೆ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. | ಸಾಮಾನ್ಯ ವರ್ಗ | ಸ.ಗಿ.ಆ.ಘ. ಕುಶಾಲನಗರ (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ | ನೇಮಕ ಮಾಡಿದ ಸ್ಥಳ |
|---|---|---|---|
| ಭಾರತೀಯ ವೈದ್ಯ ಪದ್ಧತಿಯ ಪದವೀಧರರು | | | |
| 4. | ಡಾ॥ ಅಮೃತವಳ್ಳಿ ಎಂ. C/o ಪುಟ್ಟಚಾರ್ ನಂ.1324, 4ನೇ ಕ್ರಾಸ್, ಬಿ.ಎಂ. ಸ್ಟ್ರೀಟ್, ಮಂಡಿ ಮಹಲ್, ಮೈಸೂರು. | ಸಾಮಾನ್ಯ ವರ್ಗ | ಪ್ರಾ.ಆ.ಕೇಂದ್ರ ಮಾದಾಪುರ (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |
| 5. | ಡಾ॥ ಉಷಾ ಕೆ.ಎಂ., D/o ಮಲ್ಲೇಶಪ್ಪ ಕೆ.ಸಿ. ನಂ.2579/1, 2ನೇ ಮಹಡಿ ಕಾಳಿದಾಸ ರಸ್ತೆ, ವಿ.ವಿ.ಮಹಲ್, ಮೈಸೂರು. | ಸಾಮಾನ್ಯ ವರ್ಗ | ಪ್ರಾ.ಆ.ಕೇಂದ್ರ ಶಾಂತಳ್ಳಿ (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |
| 6. | ಡಾ॥ ಅನುಪಮ ವಿ. ಮಿಶ್ರಾ, D/o ವಿಮಲ್ ಕುಮಾರ್, ನಂ.1344, ಸರ್ಕಾಜಿ ಸ್ಟ್ರೀಟ್ ಮಂಡಿ ಮಹಲ್, ಮೈಸೂರು. | ಸಾಮಾನ್ಯ ವರ್ಗ | ಪ್ರಾ.ಆ.ಕೇಂದ್ರ ಮೂರ್ನಾಡು (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |
| 7. | ಡಾ॥ ವಸುಂದರ ಹೆಗಡೆ, D/o ರಾಮಣ್ಣ ಎಂ. ನಂ.92, 5ನೇ ಮುಖ್ಯರಸ್ತೆ, ಎಸ್‌ಜೆಹೆಚ್ ರೋಡ್, ವಿದ್ಯಾರಣ್ಯ ಪುರಂ, ಮೈಸೂರು. | II A | ಪ್ರಾ.ಆ.ಕೇಂದ್ರ ಸುಂಟಿಕೊಪ್ಪ (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |
| 8. | ಡಾ॥ ಹಾಲೇಶ್ ಕೆ. D/o ಕೆ.ಮಲ್ಲಪ್ಪ, ಹಿಂದಿ ಶಿಕ್ಷಕರು, ಸೋಗಿ ಅಂಚೆ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಪಿನ್:583219. | III B | ಪ್ರಾ.ಆ.ಕೇಂದ್ರ ಹೆಬ್ಬಾಲೆ, (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |
| 9. | ಡಾ॥ ರೂಪ ಎಲ್. D/o ಲಕ್ಷ್ಮೀಗೌಡ, ಪೆಟ್ರೋಲ್ ಬಂಕ್ ಮುಂಭಾಗ, ತ್ಯಾಗರಾಜ ಕಾಲೋನಿ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ. | III A | ಪ್ರಾ.ಆ.ಕೇಂದ್ರ ಹುದಿಕೇರಿ., (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |
| 10. | ಡಾ॥ ಎಸ್.ಪಿ. ಪಲ್ಲವಿ, D/o ಪುಟ್ಟಸ್ವಾಮಿ, ನಂ.27, ಸಿಐಟಿಬಿ ಬ್ಲಾಕ್ ಕೇಸರೆ 2ನೇ ಸ್ಟೇಜ್, ಆರ್‌ಎಸ್ ನಾಯ್ಡು ನಗರ, ಮೈಸೂರು. | ಪರಿಶಿಷ್ಟ ಜಾತಿ | ಪ್ರಾ.ಆ.ಕೇಂದ್ರ ಭಾಗಮಂಡಲ (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ಎದುರು) |

**ಷರತ್ತುಗಳು:**

1. ಮೇಲೆ ನಮೂದಿಸಿದ ವೈದ್ಯರು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಮಡಿಕೇರಿ ಇವರಲ್ಲಿ ನೇಮಕಾತಿ ಆದೇಶ ತಲುಪಿದ 7 ದಿನಗಳೊಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು, ತಪ್ಪಿದಲ್ಲಿ ಈ ನೇಮಕಾತಿ ಆದೇಶವು ತಾನಾಗಿಯೇ ರದ್ದಾಗುತ್ತದೆ.
2. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಇವರನ್ನು ಕರ್ತವ್ಯಕ್ಕೆ ತೆಗೆದು ಕೊಳ್ಳುವ ಮುನ್ನ ಅವರ ಮೂಲ ಜನನ ಪ್ರಮಾಣ ಪತ್ರ/ ಜಾತಿ/ ಪ್ರಮಾಣ ಪತ್ರ ಹಾಗೂ ಇನ್ನಿತರ ದಾಖಲೆಗಳನ್ನು ಪರಿಶೀಲಿಸಿ ಸರಿಯಾಗಿದೆಯೇ ಎಂದು ಖಚಿತಪಡಿಸಿಕೊಂಡು ಕರ್ತವ್ಯಕ್ಕೆ ತೆಗೆದು ಕೊಳ್ಳಲು ಸೂಚಿಸಿದೆ. ಮೂಲ ದಾಖಲಾತಿಗಳಲ್ಲಿ ವ್ಯತ್ಯಾಸ ಕಂಡುಬಂದಲ್ಲಿ ನೇಮಕಾತಿ ಆದೇಶವನ್ನು ರದ್ದುಪಡಿಸಲಾಗುವುದು.
3. ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಗಳು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸರ್ಕಾರದ ಆದೇಶದಂತೆ ಹೇಳಿರುವ ನಿಬಂಧನೆ ಮತ್ತು ಶರತ್ತುಗಳನ್ನು ಒಪ್ಪಿಕೊಂಡಿರುವ ಬಗ್ಗೆ 100 ರೂ. (ರೂ. ಒಂದು ನೂರರ) ಛಾಪಾ ಕಾಗದದ ಮೇಲೆ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣೀಕರಿಸಿ ಸಲ್ಲಿಸತಕ್ಕದ್ದು.
4. ಕೇಂದ್ರ ಸ್ಥಾನದಲ್ಲಿ ವಾಸವಿರುವುದಾಗಿ ಮುಚ್ಚಳಿಕೆಯನ್ನು ಬರೆದು ಕೊಡತಕ್ಕದ್ದು.
5. ಗುತ್ತಿಗೆ ಆಧಾರದ ನೇಮಕಾತಿಯು ತಾತ್ಕಾಲಿಕವಾಗಿ ಯಾವುದೇ ಸಮಯದಲ್ಲಿ ಯಾವುದೇ ಕಾರಣವಿಲ್ಲದೆ ಮತ್ತು ಒಂದು ತಿಂಗಳ ಮುಂಚಿತವಾಗಿ ನೋಟೀಸು ನೀಡಿ ವಿಮುಕ್ತಿಗೊಳಿಸುವ ಷರತ್ತಿಗೊಳಪಟ್ಟಿರುತ್ತದೆ.
6. ಈ ಗುತ್ತಿಗೆ ಆಧಾರದ ನೇಮಕಾತಿಯು ಕೇವಲ ತಾತ್ಕಾಲಿಕ ನೇಮಕಾತಿಯಾಗಿದ್ದು, ಯಾವುದೇ ಕಾರಣಕ್ಕೂ ನೇಮಕಾತಿ ಮಾಡಿದ ಸ್ಥಳವನ್ನು ಬದಲಾಯಿಸಲು ಬರುವುದಿಲ್ಲ. ಮತ್ತು ವರ್ಗಾವಣೆಗೆ ಅವಕಾಶವಿರುವುದಿಲ್ಲ.
7. ಭಾರತೀಯ ವೈದ್ಯ ಪದ್ಧತಿಯಡಿಯಲ್ಲಿ (ಐಎಸ್‌ಎಂ) ನೇಮಕಾತಿಗೊಂಡ ವೈದ್ಯರು ಯಾವುದೇ ಕಾರಣಕ್ಕೂ ಅಲೋಪತಿ ಔಷಧಿಯನ್ನು ಬಳಸತಕ್ಕದ್ದಲ್ಲ.

ಜಿಲ್ಲಾಧಿಕಾರಿಗಳು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.44

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ.ಎಲ್.ಎನ್.ಡಿ (ಎನ್)ಸಿ.ಆರ್: 137: 05-06, ದಿನಾಂಕ:13ನೇ ಡಿಸೆಂಬರ್, 2006**

**ವಿಷಯ:** ಶೃಶತಿನಗರ, ಮಾರುತಿನಗರ, ಫ್ರೆಂಡ್ಸ್ ಕಾಲೋನಿ ಮತ್ತು ಶಿವಾನಂದ ನಾಗೀಕರು ವಿದ್ಯಾ ಇಲಾಖೆಯಿಂದ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೆಗ್ಗನಹಳ್ಳಿ ಗ್ರಾಮದ ಸ.ನಂ.68 ರಲ್ಲಿ 0.09 ಗುಂಟೆ ಜಮೀನನ್ನು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ಮಂಜೂರಾತಿ ಕೋರಿರುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 757 ಎಲ್.ಜಿ.ಬಿ. 2006, ದಿನಾಂಕ:15.11.2006.

2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: ಸಿ.ಆರ್.:353, 154, 156,218/ 05-06, ದಿನಾಂಕ:23.03.2006.

ಶ್ರೀಮತಿ ಎಲ್.ಜಯಲಕ್ಷ್ಮಿ ಆರ್.ರಂಗಸ್ವಾಮಿ, ನಗರಸಭಾ ಸದಸ್ಯರು, ಟಿ. ದಾಸರಹಳ್ಳಿ ರವರು ದಿನಾಂಕ:25.08.2005 ರಂದು ಈ ಕಛೇರಿಗೆ ಮನವಿ ಸಲ್ಲಿಸಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೆಗ್ಗನಹಳ್ಳಿ ಗ್ರಾಮ ಸ.ನಂ.68 ರಲ್ಲಿ 0.20 ಗುಂಟೆ ಜಮೀನನ್ನು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಾಗಿ ಮಂಜೂರು ಮಾಡಬೇಕೆಂದು ಇದರಿಂದ ವಿದ್ಯಾ ಇಲಾಖೆಯವರು ಅನುದಾನದಲ್ಲಿ ಶಾಲಾ ಕಟ್ಟಡ ನಿರ್ಮಾಣ ಮಾಡಿ ಇಲ್ಲಿಯ ಬಡ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಉಂಟಾಗುತ್ತದೆ ಎಂದು ಕೋರಿರುತ್ತಾರೆ.

ಈ ಬಗ್ಗೆ ಉಲ್ಲೇಖದ ಪತ್ರದಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕುರವರಿಂದ ವರದಿ ಪಡೆಯಲಾಗಿದ್ದು, ಹೆಗ್ಗನಹಳ್ಳಿ ಗ್ರಾಮ ಸ.ನಂ.68 ಸರ್ಕಾರಿ ಗೋಮಾಳ ಜಮೀನಾಗಿದ್ದು, ಈ ಜಮೀನಿನಲ್ಲಿ ಈ ಹಿಂದೆ ಸರ್ಕಾರದಿಂದ ಉಚಿತ ನಿವೇಶನದ ಹಂಚಿಕೆಯಾಗಿದ್ದು, ಜನತಾ ಮನೆಗಳು ನಿರ್ಮಾಣವಾಗಿ ಫಲಾನುಭವಿಗಳು ವಾಸವಾಗಿರುತ್ತಾರೆ. ಸದರಿ ಪ್ರದೇಶದಲ್ಲಿ 20,000 ಜನಸಂಖ್ಯೆಯಿಂದ ಕೂಡಿದ್ದು, ಈಗ ಇರುವ ಸರ್ಕಾರಿ ಶಾಲೆ ಜಾಗವು ಸಾಕಾಗುವುದಿಲ್ಲವಾದ್ದರಿಂದ ಸರ್ಕಾರಿ ಶಾಲೆಗಾಗಿ 0.09 ಗುಂಟೆ ಜಮೀನು ಮಂಜೂರು ಮಾಡಬಹುದಾಗಿರುತ್ತದೆ ಎಂದು ವರದಿ ನೀಡಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಹೆಗ್ಗನಹಳ್ಳಿ ಸ.ನಂ.68ರ ಸರ್ಕಾರಿ ಗೋಮಾಳದಲ್ಲಿ 0.09 ಗುಂಟೆಯನ್ನು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಾಗಿ ಮಂಜೂರು ಮಾಡುವ ಬಗ್ಗೆ ಈ ಕಛೇರಿಯಿಂದ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಉಲ್ಲೇಖ (1)ರ ಸರ್ಕಾರದ ಪತ್ರದಲ್ಲಿ ಪ್ರಶ್ನಿತ ಜಮೀನನ್ನು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಾಗಿ ಶಿಕ್ಷಣ ಇಲಾಖೆಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಲಾಗಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೆಗ್ಗನಹಳ್ಳಿ ಗ್ರಾಮದ ಸ.ನಂ.68ರ ಸರ್ಕಾರಿ ಗೋಮಾಳದಲ್ಲಿ 0.09 ಜಮೀನನ್ನು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಾಗಿ, ಶಿಕ್ಷಣ ಇಲಾಖೆಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರನ್ವಯ ಕಾಯ್ದಿರಿಸಲಾಗಿದೆ. ಸದರಿ ಜಮೀನಿನ ಉಸ್ತುವಾರಿಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಉತ್ತರ ವಲಯ ರವರು ನಿರ್ವಹಿಸಲು ಸೂಚಿಸಿದೆ ಹಾಗೂ ಸಂಬಂಧಪಟ್ಟ ಇಲಾಖೆಯವರು, ಸದರಿ ಜಮೀನನ್ನು ಶಾಲಾ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳದಿದ್ದಲ್ಲಿ ಸದರಿ ಜಮೀನನ್ನು ಕಂದಾಯ ಇಲಾಖೆಗೆ ಹಿಂತೆಗೆದುಕೊಳ್ಳಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.45

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಚೇರಿ, ಬೆಂಗಳೂರು, ಇವರ ನಡವಳಿಗಳು

### ಸಂಖ್ಯೆ: ಆರ್‌ಸಿಎಸ್/ ಎಲ್‌ಕ್ಯೂಡಿ/ 19/ 2006-07, ದಿನಾಂಕ:5ನೇ ಜನವರಿ, 2007

**ವಿಷಯ:** ಏಡ್ ದಿ ವೀಕರ್ ಟ್ರಸ್ಟ್ ವುಮೆನ್ ಪ್ರಿಂಟರ್ಸ್ ಕೋ-ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು-69 ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಸಮಸಂಖ್ಯೆಯ ನೋಟಿಸ್ ದಿನಾಂಕ:30.06.2006.

2. ಸಂಖ್ಯೆ: ಜೆಆರ್‌ಬಿ/ ಎಲ್‌ಕ್ಯೂಡಿ/ 05/ ಎಲ್‌ಎಂಸಿ/ 2006-07, ದಿನಾಂಕ:16.06.2006.
3. ಓಟಿಎಸ್/ 51/ ಹೆಚ್‌ಒಟಿ/ 2006-07, ದಿನಾಂಕ:06.06.2006.
4. ಸ.ಸಂ. ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಎಆರ್-2/ ನಿಷ್ಕ್ರಿಯ/ 55/ 2004-05, ದಿನಾಂಕ:28.02.2005.

**ಪ್ರಸ್ತಾವನೆ:**

ಏಡ್ ದಿ ವೀಕರ್ ವುಮೆನ್ ಪ್ರಿಂಟರ್ಸ್ ಕೋ-ಆಪರೇಟಿವ್ ಸೊಸೈಟಿ ನಿ., ನಂ.46/2, ಇಂಡಸ್ಟ್ರಿಯಲ್ ಶೆಡ್ ಕಾಂಪ್ಲೆಕ್ಸ್, 9ನೇ ಬಡಾವಣೆ, ಪೂರ್ವ ಜಯನಗರ, ಬೆಂಗಳೂರು-69, ಈ ಸಂಘವು ಸಂಖ್ಯೆ: ಜೆಆರ್‌ಸಿ/ 18/5/15998/ 92-93, ದಿನಾಂಕ:02.11.1992 ರಂತೆ ನೋಂದಣಿ ಆಗಿರುತ್ತದೆ. ಇದರ ಕಾರ್ಯ ವ್ಯಾಪ್ತಿಯು ಬೆಂಗಳೂರು ಮಹಾನಗರಪಾಲಿಕೆ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸೀಮಿತವಾಗಿರುತ್ತದೆ. ಸಂಘವು ತನ್ನ ಮೂಲ ಉದ್ದೇಶಗಳನ್ವಯ ವ್ಯವಹರಿಸದೇ ಸ್ಥಗಿತಗೊಂಡಿರುತ್ತದೆ.

1) ಸದರಿ ಸಂಘವು 1992 ರಿಂದ ಕಾರ್ಯ ನಿರ್ವಹಿಸುತ್ತಿದ್ದರೂ ಕಳೆದ 2002 ರಿಂದ ಸ್ಥಗಿತಗೊಂಡಿರುತ್ತದೆ.

2) ಸಂಘದ ಆಡಳಿತ ಮಂಡಳಿಯು ಶಾಸನಬದ್ಧ ಲೆಕ್ಕ ಪರಿಶೋಧನೆ ಮುಗಿದ ನಂತರ ದಿನಾಂಕ:13.10.2002 ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳನ್ವಯ ಸಂಘವನ್ನು ಮುಚ್ಚಲು ತೀರ್ಮಾನಿಸಿ, ಸದರಿ ನಿರ್ಣಯವನ್ನು ಸಂಘದ ಸದಸ್ಯರು ದಿನಾಂಕ:27.10.2002 ರಂದು ನಡೆದ ಮಹಾ ಸಭೆಯಲ್ಲಿ ಅವಿರೋಧವಾಗಿ ಒಪ್ಪಿಗೆಯನ್ನು ನೀಡಿರುತ್ತೀರಿ.

3) ಸಂಘದ ನಿರ್ಣಯದಂತೆ ಸಂಘವು ಕಾರ್ಯನಿರ್ವಹಿಸದೇ ಇರುವುದರಿಂದ ಯಾವುದೇ ಆರ್ಥಿಕ ನೆರವು ಪಡೆಯದೆ ಇರುವುದರಿಂದ ಸಂಘವನ್ನು ಸಮಾಪನೆಗೊಳಿಸಬೇಕೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ರವರು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರಿಗೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಹಾಲಿ ಸಂಘದ ಅಸ್ತಿತ್ವವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ/ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿರುವುದಿಲ್ಲವೆಂದು ಪ್ರಸ್ತಾಪಿಸಿರುತ್ತಾರೆ.

ಆದ ಪ್ರಯುಕ್ತ ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಸಮಾಪನೆಗೊಳಿಸಬಹುದು ಎಂದು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಂಘದ ಉಪ ನಿಯಮಗಳಂತೆ ಉದ್ದೇಶಗಳನ್ನು ಈಡೇರಿಸಲು ವಿಫಲವಾಗಿದ್ದು ಸಂಘವನ್ನು ನಡೆಸಲು ಆಸಕ್ತಿ ತೋರದೆ ಇರುವುದು ಕಂಡುಬಂದಿರುವುದರಿಂದ ಸಂಘವನ್ನು ಕಲಂ 72(2) ರನ್ವಯ ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಸಂಘದ ಅಧ್ಯಕ್ಷರು ಹಾಗೂ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ (1)ರಲ್ಲಿ ಕಾರಣ ಕೇಳುವ ನೋಟೀಸ್ ನೀಡಿ ಸದರಿ ಸಂಘವನ್ನು ಸಮಾಪನೆಗೊಳಿಸಲು ತಮ್ಮ ಆಕ್ಷೇಪಣೆ ಅಥವಾ ಹೇಳಿಕೆಯೇನಾದರೂ ಇದ್ದಲ್ಲಿ ಲಿಖಿತ ರೂಪದಲ್ಲಿ ಈ ಕಛೇರಿಗೆ ಕಳುಹಿಸಲು ತಿಳಿಸಲಾಗಿದ್ದು, ಅದರಂತೆ 3 ನೋಟೀಸ್ ಜಾರಿಯಾಗಿದ್ದು, ಉಳಿದ ನೋಟೀಸ್‌ಗಳು ಜಾರಿಯಾಗದೇ ಹಿಂತಿರುಗಿ ಬಂದಿರುತ್ತದೆ. ಸಂಘದ ಅಧ್ಯಕ್ಷರು ಮಾತ್ರ ಸಮಜಾಯಿಷಿ

ಸಲ್ಲಿಸಿದ್ದು, ಉಳಿದವರು ಯಾರೂ ಸಹ ಸಮಜಾಯಿಷಿ/ ಆಕ್ಷೇಪಣೆಯನ್ನು ಸಲ್ಲಿಸಿರುವುದಿಲ್ಲ. ಸಂಘದ ಅಧ್ಯಕ್ಷರು ಸಮಾಪನೆಗೊಳಿಸಲು ಕೋರಿದ್ದು ಬೇಗ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಲು ಕೋರಿರುತ್ತಾರೆ. ಆದರೆ ಸಂಘದಲ್ಲಿ ಸರ್ಕಾರದ ಷೇರು ಹಾಗೂ ಸಾಲ ಇರುತ್ತದೆ. ಆದ್ದರಿಂದ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿ. ಚನ್ನಪ್ಪ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ/ 69/ ಸಿಎಲ್ಎಂ/ 2001, ದಿನಾಂಕ:21.11.2001 ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ದತ್ತವಾಗಿರುವ ಅಧಿಕಾರದನ್ವಯ ಏಡ್ ದಿ ವೀಕರ್ ಟ್ರಸ್ಟ್ ವುಮೆನ್ ಪ್ರಿಂಟರ್ಸ್ ಕೋ-ಆಪರೇಟಿವ್ ಸೊಸೈಟಿ ನಿ, ನಂ.46/2, ಇಂಡಸ್ಟ್ರಿಯಲ್ ಶೆಡ್ ಕಾಂಪ್ಲೆಕ್ಸ್, 9ನೇ ಬಡಾವಣೆ, ಪೂರ್ವ ಜಯನಗರ, ಬೆಂಗಳೂರು-69 ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 73(1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿಯನ್ನು ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಅಢಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ದತಿಯ ಪ್ರಸ್ತಾವೆ ಸಲ್ಲಿಸಲು ಜರೂರು ಕ್ರಮಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:05.01.2007ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು
ಪಿ.ಆರ್.47 (ಕೈಗಾರಿಕೆ ಮತ್ತು ಇತರೆ).

## ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಶ್ರೀ ಬಸವೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1. ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ ಡಿವಿಜಿ/ ಎಲ್‌ಕ್ಯೂಡಿ/ 44/ 05-06, ದಿನಾಂಕ:23.05.2006.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:03.11.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮಸಂಖ್ಯೆ: ಎಆರ್/ 31/ ಆರ್‌ಜಿಎನ್/ 27106/ 2000-01 ದಿನಾಂಕ:07.08.2000ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಇವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಸಹ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಶಿಫಾರಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ: ಎಲ್‌ಕ್ಯೂಡಿ:ಸಿಆರ್-12/ 06-07, ದಿನಾಂಕ:8ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎ: 2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಶ್ರೀ ಬಸವೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇದರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:14.11.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು
ಪಿ.ಆರ್.48 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಕಾರ್ಯಪಾಲಕ ಅಭಿಯಂತರವರ ಕಛೇರಿ, ನಂ.2ನೇ ಲೋಕೋಪಯೋಗಿ ಉಪವಿಭಾಗ, ಹೊನ್ನಾಳಿ-577217

**ಸುತ್ತೋಲೆ**

**ಸಂಖ್ಯೆ: ಸಿಬ್ಬಂದಿ1: ಮಾಹಿತಿ ಹಕ್ಕು ಕೈಪಿಡಿ:05:2005-06:06-07, ದಿನಾಂಕ:14ನೇ ಜೂನ್, 2006**

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5(1)ರ ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯ ವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ:05:ಇಎಸ್ಎಲ್.05-06, ದಿನಾಂಕ:19.09.2005ರ ಪ್ರಕಾರ ಸಹಾಯಕ

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ನಂ.2ನೇ ಉಪ ವಿಭಾಗ, ಹೊನ್ನಾಳಿ ಇವರು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಓ) ಯಾಗಿ ನೇಮಕಗೊಂಡಿದ್ದು, ಮಾಹಿತಿ ನೀಡುವ ಪ್ರಕ್ರಿಯೆಯು ಸುಲಲಿತವಾಗಿ ನಡೆಯಲು ಅನುಕೂಲವಾಗುವಂತೆ ಶ್ರೀ ಕೆ. ಜಯಣ್ಣ, ಸಹಾಯಕ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ನಂ.2ನೇ ಉಪವಿಭಾಗ, ಹೊನ್ನಾಳಿ ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಓ.) ಯಾಗಿ ನೇಮಕಗೊಳಿಸಲಾಗಿದೆ.

ಈ ಕಛೇರಿಯ ಮಾಹಿತಿಗಳನ್ನು ಸಾರ್ವಜನಿಕರಿಗೆ ನೀಡುವ ಸಲುವಾಗಿ ಮಾಹಿತಿ ಹಕ್ಕು ಕೈಪಿಡಿ-2005ನ್ನು ಈ ಮೂಲಕ ಹೊರಡಿಸಲಾಗಿದೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರು,
ನಂ.2ನೇ ಲೋ.ಇ. ಉಪವಿಭಾಗ,
ಹೊನ್ನಾಳಿ-577217.

ಪಿ.ಆರ್.49

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು

## ಅಧಿಸೂಚನೆ

## ಸಂಖ್ಯೆ:ಕೃಮಾಇ/ 26/ ಚುನಾವ/ 2005, ಬೆಂಗಳೂರು, ದಿನಾಂಕ:5ನೇ ಜನವರಿ, 2007

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯ್ದೆ, 1966ರ ಪ್ರಕರಣ 11ರ ಉಪ ಪ್ರಕರಣ (1) (viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ಪ್ರಕರಣ 11ರ ಪ್ರಕಾರ ರಚಿತವಾಗಿರುವ ಈ ಕೆಳಕಂಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಅವುಗಳ ಮುಂದೆ ಕಾಣಿಸಿರುವ ಅಧಿಕಾರಿಗಳನ್ನು ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|
| ದಕ್ಷಿಣ ಕನ್ನಡ | 1. ಪುತ್ತೂರು | ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. |
| | 2. ಸುಳ್ಯ | ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. |
| ಉತ್ತರ ಕನ್ನಡ | 3. ಶಿರಸಿ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸಾಗರ. |
| | 4. ಮುಂಡಗೋಡ | ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಉತ್ತರ ಕನ್ನಡ ಜಿಲ್ಲೆ, ಶಿರಸಿ. |
| ಹಾಸನ | 5. ಅರಸೀಕೆರೆ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ತಿಪಟೂರು. |
| ಹಾವೇರಿ | 6. ಬ್ಯಾಡಗಿ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ದಾವಣಗೆರೆ. |

**ಜಿ.ಎಸ್. ನಾರಾಯಣಸ್ವಾಮಿ**
ನಿರ್ದೇಶಕರು.

ಪಿ.ಆರ್.50

## ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ

## (ಕರ್ನಾಟಕ ಸರ್ಕಾರದ ಒಂದು ಉದ್ದಿಮೆ)

## ಸೂಪರಿಂಟೆಂಡಿಂಗ್ ಇಂಜನೀಯರವರ ಕಛೇರಿ, ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ

## ಅಧಿಸೂಚನೆ

ಕೃಷ್ಣಾ ಮೇಲ್ದಂಡೆ ಯೋಜನೆಯ ಆಲಮಟ್ಟಿ ಎಡದಂಡೆ ಕಾಲುವೆ, ವಿತರಣಾ ಕಾಲುವೆ ಸಂಖ್ಯೆ: 1 ರಿಂದ 9, 10(ಎ) 10(ಬಿ), 11(ಎ) 11(ಬಿ) 11(ಸಿ), 12 ರಿಂದ 15, 16(ಎ), 16 ಬಿ, 17ಎ ಮತ್ತು ಬಿ 18, 19, 21, 22, 23, 24(ಎ), 24(ಬಿ), 25(ಎ), 26(ಎ), 26(ಬಿ), 27(ಎ), 27 ಹೆಚ್ಚುವರಿ ವಿತರಣಾ ಕಾಲುವೆ ಸರಪಳಿ 10.71 ಕಿ.ಮೀ.12.60 ಕಿ.ಮೀ ಹೆಚ್ಚುವರಿ ನೇರು ತೊಬೂಗಳು ಹಾಗೂ ಆಲಮಟ್ಟಿ ಬಲದಂಡೆ ಕಾಲುವೆ ವಿತರಣಾ ಕಾಲುವೆ 1,2,3(ಎ), 3ಬಿ, 4, 5, 6, 7, 8, 9ಎ, ಬಿ, ಸಿ, 10, 10(ಎ), 10(ಬಿ), 10(ಸಿ), 10(ಡಿ), 11, 12, ಮತ್ತು 14ರ ಅಡಿಯಲ್ಲಿ ನೀರಾವರಿಗೆ ಅಧಿಸೂಚಿಸುವ ಒಟ್ಟು ಕ್ಷೇತ್ರ 18903.25 ಹೆಕ್ಟೇರ್ ಇದ್ದು ಅದನ್ನು ನೀರಾವರಿ ಸಲಹಾ ಸಮಿತಿಯ ಸಭೆ ದಿನಾಂಕ:06.12.2005 ರಂದು ಚರ್ಚಿಸಲಾಗಿದ್ದು ಸಭೆಯ ನಡುವಳಿ ಪತ್ರ ಸಂಖ್ಯೆ: ಕೃಭಾಜನಿನಿ/ ಜೆಬಿಸಿ ವೃತ್ತ/ ಪಿಬಿ.2/ ನೀ.ಸ.ಸ/ 2005-06/ 3325, ದಿನಾಂಕ:16.12.2005ರಲ್ಲಿ ಘೋಷಿಸಲಾಗಿದೆ.

ಕೃಷ್ಣಾ ಮೇಲ್ದಂಡೆ ಯೋಜನೆಯ 2005-06ನೇ ಸಾಲಿನ ಹಿಂಗಾರು ಹಂಗಾಮಿಗೆ ನೀರಾವರಿಯ ಕ್ಷೇತ್ರಗಳ ಸರ್ವೆ ನಂಬರುಗಳ ವಿವರಣೆಗಳು.

1. ಈ ಮೇಲಿನ ಸರ್ವೆ ನಂಬರುಗಳ ಜಮೀನುಗಳಿಗೆ 2005-06ನೇ ಸಾಲಿನ ಮುಂಗಾರು ಹಂಗಾಮಿನಿಂದ ನೀರಾವರಿಗಾಗಿ ನೀರು ಬಿಡಲಾಗುತ್ತಿದೆ.

2. ನೀರಿನ ಕರಾಕರಣೆ ಕಾಲಕಾಲಕ್ಕೆ ಕರ್ನಾಟಕ ಸರ್ಕಾರ/ ಕೃಭಾಜನಿನಿ ಹೊರಡಿಸಿರುವ ಆದೇಶಾನುಸಾರ ನೀರಿನ ಕರಾಕರಣೆ ಮಾಡಲಾಗುವುದು ಹಾಗೂ ನಿಷೇಧಿಸಿದ ಬೆಳೆಗಳಾದ ಕಬ್ಬು, ಬಾಳೆ, ಭತ್ತ, ವಿಳೆದೆಲೆ, ದ್ರಾಕ್ಷಿ ಹಾಗೂ ಹೆಚ್ಚು ನೀರು ಬೇಕಾಗುವ ಬೆಳೆಗಳನ್ನು ಬೆಳೆಯದಂತೆ ನಿಷೇಧಿಸಲಾಗಿದೆ, ನಿಷೇಧಿತ ಬೆಳೆಗಳನ್ನು ಬೆಳೆದಲ್ಲಿ ಕಾನೂನಿನ ಪ್ರಕಾರ ಕ್ರಮ ಜರುಗಿಸಲಾಗುವುದು.

**ಬಿ. ವಾಯ್ ಜುಮ್ನಾಳ**
ಸೂಪರಿಂಟೆಂಡಿಂಗ್ ಇಂಜಿನೀಯರರು,
ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ.

**ಸಂಖ್ಯೆ:ಕೃಭಾಜನಿನಿ/ ಆವ್ಯಅ/ ಯೂಶಾ/ 2005-2006/ 2313, ದಿನಾಂಕ:21ನೇ ಡಿಸೆಂಬರ್, 2005**

1. ಪ್ರತಿಯನ್ನು ಮಾನ್ಯ ಕಾರ್ಯದರ್ಶಿಗಳು ಜಲ ಸಂಪನ್ಮೂಲ ಇಲಾಖೆ, ಬಹುಮಹಡಿ ಕಟ್ಟಡ ಬೆಂಗಳೂರು-1, ಇವರ ದಯಾಪರ ಮಾಹಿತಿಗಾಗಿ ಸಲ್ಲಿಸಲಾಗಿದೆ.
2. ಪ್ರತಿಯನ್ನು ಮಾನ್ಯ ವ್ಯವಸ್ಥಾಪಕ ನಿರ್ದೇಶಕರು ಕೃಭಾಜನಿನಿ ಬೆಂಗಳೂರು/ ಆಲಮಟ್ಟಿ ಇವರ ದಯಾಪರ ಮಾಹಿತಿಗಾಗಿ ಸಲ್ಲಿಸಲಾಗಿದೆ.
3. ಪ್ರತಿಯನ್ನು ಮಾನ್ಯ ಆಡಳಿತಾಧಿಕಾರಿಗಳು, ಕೃಷ್ಣಾ ಕಾಡಾ ಭೀಮರಾಯನಗುಡಿ, ಇವರ ದಯಾಪರ ಮಾಹಿತಿಗಾಗಿ ಸಲ್ಲಿಸಲಾಗಿದೆ.
4. ಮಾನ್ಯ ಮುಖ್ಯ ಇಂಜನೀಯರರು ಕೃಭಾಜನಿನಿ ಅಣೆಕಟ್ಟು ವಲಯ ಆಲಮಟ್ಟಿ ಇವರ ದಯಾಪರ ಮಾಹಿತಿಗಾಗಿ ಸಲ್ಲಿಸಲಾಗಿದೆ.
5. ಪ್ರತಿಯನ್ನು ಭೂ ಅಭಿವೃದ್ಧಿ ಅಧಿಕಾರಿಗಳು (ಕೃಷಿ) ಭೀಮರಾಯನಗುಡಿ ಇವರ ದಯಾಪರ ಮಾಹಿತಿಗಾಗಿ ಸಲ್ಲಿಸಲಾಗಿದೆ.
6. ಪ್ರತಿಯನ್ನು ಅಭಿನಂದನೆಗಳೊಂದಿಗೆ ಅಧೀಕ್ಷಕ ಅಭಿಯಂತರರು, ಕೃಭಾಜನಿ(ನಿ) ನಾ.ಬ.ದ.ಕಾ. ವೃತ್ತ ಕೃಷ್ಣಾಪುರ/ ಜೆಬಿಸಿ ವೃತ್ತ ಭೀಮರಾಯನಗುಡಿ/ ನೀ ಮತ್ತು ಪೋ ವೃತ್ತ ನಾರಾಯನಪುರ/ ನೀ ಮತ್ತು ಪೋ ವೃತ್ತ ರಾಂಪುರ ಪಿ.ಎ. ತಾಲ್ಲೂಕು ಸಿಂಧಗಿ ಬಿಜಾಪುರ ಜಿಲ್ಲೆ ಇವರ ದಯಾಪರ ಮಾಹಿತಿಗಾಗಿ ಸಲ್ಲಿಸಲಾಗಿದೆ.
7. ಪ್ರತಿಯನ್ನು ತಹಶೀಲ್ದಾರರು ಬ.ಬಾಗೇವಾಡಿ/ ಬಿಜಾಪುರ/ ಮುದ್ದೆಬಿಹಾಳ/ ಬಾಗಲಕೋಟೆ/ ಹುನಗುಂದ ಇವರ ದಯಾಪರ ಮಾಹಿತಿಗಾಗಿ ಸಲ್ಲಿಸಲಾಗಿದೆ.
8. ಪ್ರತಿಯನ್ನು ಸಂಪಾದಕರು ಕರ್ನಾಟಕ ರಾಜ್ಯ ಪತ್ರ ಬೆಂಗಳೂರು ಇವರ ಮಾಹಿತಿಗಾಗಿ ರವಾನಿಸುತ್ತ ಸದರಿ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ವಿನಂತಿಸಲಾಗಿದೆ.
9. ಪ್ರತಿಯನ್ನು ಕಾರ್ಯಪಾಲಕ ಅಭಿಯಂತರರು ಕೃಭಾಜನಿನಿ ಅಣೆಕಟ್ಟು ವಿಭಾಗ/ ಆಎದಂಕಾ ವಿಭಾಗ/ ಆಬದಕಾ ವಿಭಾಗ/ ಹೊಲಗಾಲುವೆ ವಿಭಾಗ ನಂ.3 ಆಲಮಟ್ಟಿ ಇವರ ಮಾಹಿತಿಗಾಗಿ ರವಾನಿಸಲಾಗಿದೆ. ಅಧಿಸೂಚಿತ ಕ್ಷೇತ್ರದ ಬಗ್ಗೆ ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆ ದಿನಪತ್ರಿಕೆಯಲ್ಲಿ ಪ್ರಕಟಿಸಲು ಸೂಚಿಸಲಾಗಿದೆ. ಮತ್ತು ನೀರಿನ ಕರಾಕರಣೆಯ ಬಗ್ಗೆ ನಿಯಮಾನುಸಾರ ಕ್ರಮ ಜರುಗಿಸಲು ತಿಳಿಸಿದೆ. ತಮ್ಮ ಕಾರ್ಯವ್ಯಾಪ್ತಿಗೆ ಒಳಪಡುವ ಅಧಿಸೂಚಿತ ಕ್ಷೇತ್ರದ ಬಗ್ಗೆ ಸಂಬಂಧಿಸಿದ ಗ್ರಾಮ ಪಂಚಾಯತಿಗಳಲ್ಲಿ ಪ್ರಕಟಿಸಲು ತಮ್ಮ ಕಛೇರಿಯ ಮುಖಾಂತರ ಕಳೂಹಿಸಲು ಸೂಚಿಸಲಾಗಿದೆ.

**ಬಿ. ವಾಯ್ ಜುಮ್ಮಾಳ**

ಸೂಪರಿಂಟೆಂಡಿಂಗ್ ಇಂಜಿನೀಯರರು,
ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ.

**ನೀರಾವರಿ ಅಧಿಕಾರಿಗಳು ಹಾಗೂ ಅಧೀಕ್ಷಕ ಅಭಿಯಂತರರು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ಅಣೆಕಟ್ಟು ವೃತ್ತ ಆಲಮಟ್ಟಿ ಇವರ ಕಛೇರಿ ಅಧಿಸೂಚನೆ**

ಕರ್ನಾಟಕ ಇರಿಗೇಶನ್ ಆಕ್ಟ್ 1965ರ ನಿಯಮ 27 ರನ್ವಯ ಆಲಮಟ್ಟಿ ಎಡದಂಡೆ ಕಾಲುವೆ, ಬಲದಂಡೆ ಕಾಲುವೆ ಮೂಲಕ 2005-06ರ ಹಿಂಗಾರು ಹಂಗಾಮಿನ ಬೆಳೆಗಳಿಗೆ ತಪಶೀಲು ಬ: ಮತ್ತು ಕ: ಗಳಲ್ಲಿ ನಮೂಧಿಸಿದ ಕ್ಷೇತ್ರಗಳಲ್ಲಿ ನೀರು ಬಿಡಲಾಗುವುದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

ನೀರನ್ನು ಬಿಡುವ ವೇಳೆ ಮತ್ತು ಅವಧಿ ನೀರನ್ನು ಪಡೆಯುವ ಕ್ಷೇತ್ರ ಬೆಳೆಯಲು ಶಿಫಾರಸ್ಸು ಮಾಡಿದ ಬೆಳೆಗಳು ಬಿತ್ತುವ ಕಾಲ ಮತ್ತು ಬೆಳೆಗಳ ಅವಧಿ ಮತ್ತು ಬೆಳೆಯಲು ನಿಷೇಧಿಸಲ್ಪಟ್ಟ ಬೆಳೆಗಳು ಈ ಕೆಳಗಿನಂತಿವೆ.

1. ಅ) ಹಿಂಗಾರು ಬೆಳೆಗಾಗಿ ದಿನಾಂಕ:05.12.2005 ರಿಂದ 24.03.2006 ರವರೆಗೆ ನೀರಿನ ವಿತರಣೆ ಮಾಡಲಾಗುವುದು.

ಆ) ಎರಡು ಋತು (ದೀರ್ಘಾವಧಿ) ಬೆಳೆಗಳಿಗೆ ಋತುವಿನಲ್ಲಿ ನೀರಿನ ವಿತರಣಾ ಮುಂದುವರಿಸಲಾಗುವುದು.

2. ನೀರು ಒದಗಿಸುವ ಅವಧಿ ಪ್ರತ್ಯೇಕವಾಗಿ ಪಟ್ಟಿ ತಯಾರಿಸಿ ಕಳುಹಿಸಲಾಗುವುದು ನೀರಾವರಿ ಅಧಿಕಾರಿಗಳು ಮಳೆಯ ಪ್ರಮಾಣ ಇತರ ಕಾರಣಗಳನ್ನು ಅನುಲಕ್ಷಿಸಿ ವೇಳ ಪಟ್ಟಿಯನ್ನು ಬದಲಿಸಲಾಗುವುದು.

3. ನೀರು ಒದಗಿಸಲಾಗುವ ಕ್ಷೇತ್ರ ತಪಶೀಲು: ಆ: ಮತ್ತು :ಕ: ದಲ್ಲಿ ಒದಗಿಸಿದ ಕ್ಷೇತ್ರ.

4. ಶಿಫಾರಸು ಮಾಡಿದ ಬೆಳೆಗಳು (ಬೆಳೆಯಬೇಕಾದ ಬೆಳೆಗಳು) 2005-06ರ ಹಿಂಗಾರು ಹಂಗಾಮಿನಲ್ಲಿ ಈ ಬೆಳೆಗಳನ್ನು ಬೆಳೆಯಬಹುದು (1) ಜೋಳ, (2) ಗೋಧಿ, (3) ಸೂರ್ಯಕಾಂತಿ, (4) ಕುಸಬಿ, (5) ಸೆಂಗಾ, (6) ಕಡಲೆ, (7) ಮೆಕ್ಕೆಜೋಳ, (8) ತೊಗರಿ ಮತ್ತು ದ್ವಿಋತುಬೆಳೆಗಳಾದ ಹತ್ತಿ ಮೆನಸಿನಕಾಯಿ ಮತ್ತು ತರಕಾರಿ ಬೆಳೆಗಳು.

5) ಈ ಬೆಳೆಗಳನ್ನು ಕಡ್ಡಾಯವಾಗಿ ಬೆಳೆಯಲು ನಿಷೇಧಿಸಲ್ಪಟ್ಟಿದೆ, - ಭತ್ತ, ಕಬ್ಬು, ಬಾಳೆ, ವೀಳ್ಯೆದೆಲೆ ಹಾಗೂ ಹೆಚ್ಚು ನೀರು ಬೇಕಾಗುವ ಬೆಳೆಗಳು.

6) ಹಿಂಗಾರು 2005ರ ಬೆಳೆಗಳಿಗೆ ನೀರು ಒದಗಿಸುವ ತಾಲ್ಲೂಕುವಾರು ಕ್ಷೇತ್ರದ ನಿರ್ಧಾರಿತ ತಪಶೀಲು: ಅ: ಮತ್ತು :ಬ: ಗಳಲ್ಲಿ ನೀರಾವರಿಗೊಳಪಡುವ ಹಿಂಗಾರು ಕ್ಷೇತ್ರದಲ್ಲಿ ಮತ್ತು ದೀರ್ಘಾವಧಿ ಕ್ಷೇತ್ರದಲ್ಲಿ (ಎರಡು ಋತು) ಬೆಳೆಗಳ ನಿರ್ಧಾರಿತ ಪ್ರಮಾಣ ಅನುಕ್ರಮವಾಗಿ 47.50 ಶೇಕಡಾ ಮತ್ತು 42.50 ಇರುವುದೆಂಬುದನ್ನು ಗಮನಿಸಬೇಕು ಆದ್ದರಿಂದ ರೈತರು ಅಧಿಸೂಚಿತ ಕ್ಷೇತ್ರದ ಪ್ರತಿಶತ ಕ್ಷೇತ್ರಕ್ಕೆ ಮಾತ್ರ ನೀರನ್ನು ಪಡೆಯುವುದು.

**ಬಿ. ವಾಯ್ ಜುಮ್ಮಾಳ**

ಸೂಪರಿಂಟೆಂಡಿಂಗ್ ಇಂಜಿನೀಯರರು,
ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ.

## ನಮೂನೆ

## 2005-06ನೇ ಸಾಲಿನಲ್ಲಿ ಗ್ರಾಮವಾರು ಹಿಂಗಾರು ಹಂಗಾಮಿಗೆ ಹೊಸದಾಗಿ ನೀರಾವರಿಗೊಳಪಡುವ ಕ್ಷೇತ್ರದ ವಿವರ

| ಕ್ರ. ಸಂ. | ಜಿಲ್ಲಾ | ತಾಲ್ಲೂಕು | ಗ್ರಾಮ | ಹೊಸದಾಗಿ ಅಧಿಸೂಚನೆಗೊಳಿಸಬೇಕಾದ ಕ್ಷೇತ್ರ (ಹೆಕ್ಟೇರ್‌ಗಳಲ್ಲಿ) | ಷರಾ |
|---|---|---|---|---|---|
| 1 | 2 | 3 | 4 | 5 | 6 |
| 1) | ಆಲಮಟ್ಟಿ ಎಡದಂಡೆ ಕಾಲುವೆ | | | | |
| | ವಿಜಾಪುರ | ಬ.ಬಾಗೇವಾಡಿ | ಜೀರಲಭಾವಿ | 62.71 | |
| | | | ಇಟಗಿ | 28.39 | |
| | | | ಒಟ್ಟು ಕ್ಷೇತ್ರ | 91.10 | |
| | | ಮುದ್ದೇಬಿಹಾಳ | ಹೂಲ್ಲೂರ | 16.50 | |
| | | | ಕೊಪ್ಪ | 33.44 | |
| | | | ಬಳಬಟ್ಟಿ | 57.32 | |
| | | | ಮುದನಾಳ | 105.16 | |
| | | | ಹಡಗಲಿ | 38.34 | |
| | | | ಲೇಬಗೇರಿ | 71.65 | |
| | | | ಬನೊಸಿ | 139.24 | |
| | | | ಕಮಲದಿನ್ನಿ | 44.35 | |
| | | | ದೇವೂರ | 265.55 | |
| | | | ಗಂಗೂರ | 337.68 | |
| | | | ತಂಗಡಗಿ | 208.79 | |
| | | | ಕೊಳೂರ | 40.88 | |
| | | | ಹಡಲಗೇರಿ | 40.56 | |
| | | | ಬೈಲಕೂರ | 84.31 | |
| | | | ಯರಗಲ್ | 36.78 | |
| | | | ಆಲೂರ | 27.92 | |
| | | | ಹುನಕುಂಟಿ | 39.86 | |
| | | | ಬಂಗಾರಗುಂಡ | 45.21 | |
| | | | ರಕ್ಕಸಗಿ | 32.68 | |
| | | | ನಾಲತವಾಡ | 10.16 | |
| | | | ಘಾಳಪೂಜೆ | 10.75 | |
| | | | ಬಿಜ್ಜೂರ | 09.95 | |
| | | **ಒಟ್ಟು ಕ್ಷೇತ್ರ** | | **1788.18** | |
| 2) | ಆಲಮಟ್ಟಿ ಬಲದಂಡೆ ಕಾಲುವೆ | | | | |
| | ಬಾಗಲಕೋಟೆ | ಬಾಗಲಕೋಟೆ | ಮನಹಳ್ಳಿ | 138.72 | |
| | | | ನಾಗಸಂಪಗಿ | 30.60 | |
| | | | ನಾಗರಾಳ | 24.31 | |
| | | | ಹೊಸೂರ | 108.47 | |
| | | | ನಾಯನೇಗಲಿ | 48.45 | |
| | | | ಮಂಕಣಿ | 125.71 | |
| | | | ದೇವಲಾಪುರ | 31.34 | |
| | | | ಡೋಮನಾಳ | 12.31 | |
| | | | ಸುತಗುಂಡಾರ | 77.74 | |
| | | | ಚಿಟಗಿನಕೊಪ್ಪ | 47.18 | |
| | | | ಬೊಮ್ಮಣಗಿ | 29.60 | |
| | | | ಚಿಕ್ಕಮ್ಯಾಗೇರಿ | 70.00 | |
| | | | **ಒಟ್ಟು ಕ್ಷೇತ್ರ** | **744.43** | |
| | | **ಒಟ್ಟು ಕ್ಷೇತ್ರ** | | **2532.61** | |

**ಬಿ. ವಾಯ್ ಜುಮ್ನಾಳ**
ಸೂಪರಿಂಟೆಂಡಿಂಗ್ ಇಂಜಿನೀಯರರು,
ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ.

## ತಪಶೀಲು (ಅ)

| ಕಾಲುವೆ/ ವಿತರಣಾ ಕಾಲುವೆ ಹೆಸರು | ತಾಲ್ಲೂಕು/ ಜಿಲ್ಲಾ | 2002-03ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2003-04ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2003-04ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2004-05ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2004-05ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2005-06ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2005-06ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2005-06ನೇ ಸಾಲಿನ ಹಿಂಗಾರು ಹಂಗಾಮಿಗೆ ಒಟ್ಟು ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| ಆಲಮಟ್ಟಿ ಎಡದಂಡೆ ಕಾಲುವೆ | ತಾ: ಬ.ಬಾಗೇವಾಡಿ/ ಮುದ್ದೆಬಿಹಾಳ ಜಿ:ಬಿಜಾಪುರ | 1909.81 | 3808.64 | 1725.04 | 3780.56 | 1441.95 | 1553.15 | 1788.18 | 16007.33 |
| ಆಲಮಟ್ಟಿ ಬಲದಂಡೆ ಕಾಲುವೆ | ತಾ: ಬಾಗಲಕೋಟೆ ಜಿ: ಬಾಗಲಕೋಟೆ | 0 | 0 | 721.92 | 346.18 | 215.07 | 868.32 | 744.43 | 2895.92 |
| | **ಒಟ್ಟು** | **1909.81** | **3808.64** | **2446.96** | **4126.74** | **1657.02** | **2421.47** | **2532.61** | **18903.25** |
| | | | | | | | | | |

**ಬಿ. ವಾಯ್ ಜುಮ್ನಾಳ**
ಸೂಪರಿಂಟೆಂಡಿಂಗ್ ಇಂಜಿನೀಯರರು,
ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ.

## ತಪಶೀಲು (ಬ)

### 2005-2006ನೇ ಸಾಲಿನ ಹಿಂಗಾರು ಹಂಗಾಮಿಗೆ ಆಲಮಟ್ಟಿ ಎಡದಂಡೆ ಮತ್ತು ಆಲಮಟ್ಟಿ ಬಲದಂಡೆ ಕಾಲುವೆಗೆ ಸಂಬಂಧಿಸಿದ ವಿತರಣಾ ಕಾಲುವೆಗಳ ಅಡಿಯಲ್ಲಿ ಅಧಿಸೂಚಿಸಲು ಪ್ರಸ್ತಾಪಿಸಿರುವ ಕ್ಷೇತ್ರ

| ಅ. ನಂ | ಕಾಲುವೆ/ ವಿತರಣಾ ಕಾಲುವೆ ಹೆಸರು | 2002-03ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2003-04ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2003-04ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2004-05ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2004-05ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2005-06ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2005-06ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೇಕ್ಟರ್‌ಗಳಲ್ಲಿ | 2005-06ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿಸಲು ಪ್ರಸ್ತಾಪಿಸಿರುವ ಕ್ಷೇತ್ರ ಹೇಕ್ಟರ್‌ಗಳಲ್ಲಿ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| I. | **ಆಲಮಟ್ಟಿ ಎಡದಂಡೆ ಕಾಲುವೆ** | | | | | | | | |
| | ವಿತರಣಾ ಕಾಲುವೆ-1 | 925.17 | 280.16 | | 8.15 | 11.44 | | | 1224.92 |
| | ವಿತರಣಾ ಕಾಲುವೆ-2 | 984.64 | 347.25 | 170.37 | | 7.28 | | | 1509.54 |
| | ವಿತರಣಾ ಕಾಲುವೆ-3 | | | 386.88 | 55.52 | 141.18 | | | 583.58 |
| | ವಿತರಣಾ ಕಾಲುವೆ-4 | | 54.18 | | | | | | 54.18 |
| | ವಿತರಣಾ ಕಾಲುವೆ-4ಎ | | | | | 49.66 | | | 49.66 |
| | ವಿತರಣಾ ಕಾಲುವೆ-5 | | | 211.39 | 347.67 | 250.53 | 285.14 | 73.82 | 1168.55 |
| | ವಿತರಣಾ ಕಾಲುವೆ-6 | | 245.18 | | 252.5 | | | | 497.68 |
| | ವಿತರಣಾ ಕಾಲುವೆ-7 | | 63.83 | | 17.4 | | 74.38 | | 155.61 |
| | ವಿತರಣಾ ಕಾಲುವೆ-8 | | 179.74 | 34.14 | | | | | 213.88 |
| | ವಿತರಣಾ ಕಾಲುವೆ-9 | | 840.25 | | | 163.67 | 23.17 | | 1027.09 |
| | ವಿತರಣಾ ಕಾಲುವೆ-10ಎ | | 52.54 | | | | | | 52.54 |
| | ವಿತರಣಾ ಕಾಲುವೆ-10ಬಿ | | 232.42 | | | | | | 232.42 |
| | ವಿತರಣಾ ಕಾಲುವೆ-11ಎ | | 50.98 | | | | | | 50.98 |
| | ವಿತರಣಾ ಕಾಲುವೆ-11ಬಿ | | 49.58 | | | | | | 49.58 |
| | ವಿತರಣಾ ಕಾಲುವೆ-11ಸಿ | | 105.54 | | | | | | 105.54 |
| | ವಿತರಣಾ ಕಾಲುವೆ-12 | | 1007.17 | | | | 33.79 | | 1040.96 |
| | ವಿತರಣಾ ಕಾಲುವೆ-13 | | | 379.65 | 36.69 | 24.94 | 7.16 | | 448.44 |
| | ವಿತರಣಾ ಕಾಲುವೆ-14 | | 299.85 | | | | | | 299.85 |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| | ವಿತರಣಾ ಕಾಲುವೆ-15 | | | 224.39 | | | | 995.61 | 1220.00 |
| | ವಿತರಣಾ ಕಾಲುವೆ-16ಎ | | | 96.86 | 858.56 | 210.4 | 108.58 | 122.62 | 1397.02 |
| | ವಿತರಣಾ ಕಾಲುವೆ-16ಬಿ | | | 221.36 | | | | 12.00 | 233.36 |
| | ವಿತರಣಾ ಕಾಲುವೆ-17ಎ | | | | 99.35 | | | | 99.35 |
| | ವಿತರಣಾ ಕಾಲುವೆ-17ಬಿ | | | | 206.16 | | | 52.55 | 258.71 |
| | ವಿತರಣಾ ಕಾಲುವೆ-18 | | | | 243.49 | 166.97 | 164.54 | | 575.00 |
| | ವಿತರಣಾ ಕಾಲುವೆ-19 | | | | | 187.42 | | | 187.42 |
| | ವಿತರಣಾ ಕಾಲುವೆ-20 | | | | | | 102.26 | 67.78 | 170.04 |
| | ವಿತರಣಾ ಕಾಲುವೆ-21 | | | | | 115.96 | 152.01 | | 267.97 |
| | ವಿತರಣಾ ಕಾಲುವೆ-22 | | | | 488.19 | | 475.90 | 77.89 | 1041.98 |
| | ವಿತರಣಾ ಕಾಲುವೆ-23 | | | | 56.20 | | | | 56.20 |
| | ವಿತರಣಾ ಕಾಲುವೆ-24ಎ | | | | 38.78 | | | | 38.78 |
| | ವಿತರಣಾ ಕಾಲುವೆ-24ಬಿ | | | | 299.93 | | | | 299.93 |
| | ವಿತರಣಾ ಕಾಲುವೆ-25ಎ | | | | | | 63.52 | | 63.52 |
| | ವಿತರಣಾ ಕಾಲುವೆ-25ಬಿ | | | | 54.05 | | | | 54.05 |
| | ವಿತರಣಾ ಕಾಲುವೆ-26ಎ | | | | 89.94 | | | | 89.94 |
| | ವಿತರಣಾ ಕಾಲುವೆ-26ಬಿ | | | | 401.08 | | | 10.75 | 411.83 |
| | ವಿತರಣಾ ಕಾಲುವೆ-27ಎ | | | | 69.27 | | | | 69.27 |
| | ವಿತರಣಾ ಕಾಲುವೆ-27 | | | | 157.63 | | | 20.11 | 177.74 |
| | ಹೆಚ್ಚುವರಿ ವಿತರಣಾ ಕಾಲುವೆ 12.6 ಕಿಮೀ | | | | | 112.5 | 8.44 | 33.44 | 154.38 |
| | ಹೆಚ್ಚುವರಿ ವಿತರಣಾ ಕಾಲುವೆ 10.71 ಕಿಮೀ | | | | | | 54.26 | 91.10 | 145.36 |
| | ಹೆಚ್ಚುವರಿ ನೇರ ತೂಬುಗಳು | | | | | | | 230.48 | 230.48 |
| | **ಒಟ್ಟು ಕ್ಷೇತ್ರ -1** | **1909.81** | **3808.67** | **1725.04** | **3780.56** | **1441.95** | **1553.15** | **1788.15** | **16007.33** |

**ಬಿ. ವಾಯ್ ಜುಮ್ನಾಳ**
ಸೂಪರಿಂಟೆಂಡಿಂಗ್ ಇಂಜಿನೀಯರರು,
ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ.

| | **ಆಲಮಟ್ಟಿ ಬಲದಂಡೆ ಕಾಲುವೆ** | | | | | | | | |
|---|---|---|---|---|---|---|---|---|---|
| | ವಿತರಣಾ ಕಾಲುವೆ-1 | | | 127.49 | | | | | 127.49 |
| | ವಿತರಣಾ ಕಾಲುವೆ-2 | | | 129.07 | | | | | 129.07 |
| | ವಿತರಣಾ ಕಾಲುವೆ-3ಎ | | | 96.06 | | | | | 96.06 |
| | ವಿತರಣಾ ಕಾಲುವೆ-3ಬಿ | | | | 39.52 | 28.64 | | | 68.16 |
| | ವಿತರಣಾ ಕಾಲುವೆ-4 | | | | 90.707 | 80.22 | | | 170.92 |
| | ವಿತರಣಾ ಕಾಲುವೆ-5 | | | 158.44 | | 38.32 | | 216.12 | 412.88 |
| | ವಿತರಣಾ ಕಾಲುವೆ-6 | | | | 57.12 | 67.89 | | 85.98 | 210.99 |
| | ವಿತರಣಾ ಕಾಲುವೆ-7 | | | | 89.68 | | 102.37 | 48.45 | 240.50 |
| | ವಿತರಣಾ ಕಾಲುವೆ-8 | | | 210.86 | 69.16 | | 191.70 | | 471.72 |
| | ವಿತರಣಾ ಕಾಲುವೆ-9 ಎ,ಬಿ,ಸಿ | | | | | | | 47.18 | 47.18 |
| | ವಿತರಣಾ ಕಾಲುವೆ-10 ಎ,ಬಿ,ಸಿ ಮತ್ತು ಡಿ | | | | | | 249.21 | 31.34 | 280.55 |
| | ವಿತರಣಾ ಕಾಲುವೆ-11 | | | | | | 325.04 | 203.45 | 528.49 |
| | ವಿತರಣಾ ಕಾಲುವೆ-12 | | | | | | | 41.91 | 41.91 |
| | ವಿತರಣಾ ಕಾಲುವೆ-14 | | | | | | | 70.00 | 70.00 |
| | ಒಟ್ಟು ಕ್ಷೇತ್ರ-2 | | | 721.92 | 346.18 | 215.07 | 868.32 | 744.43 | 2895.92 |
| | ಒಟ್ಟು ಕ್ಷೇತ್ರ (1+2) | 1909.81 | 3808.67 | 2446.96 | 4126.74 | 1657.02 | 2421.47 | 2532.58 | 18903.25 |

**ಬಿ. ವಾಯ್ ಜುಮ್ನಾಳ**
ಸೂಪರಿಂಟೆಂಡಿಂಗ್ ಇಂಜಿನೀಯರರು,
ಕೃಭಾಜನಿನಿ ಅಣೆಕಟ್ಟು ವೃತ್ತ, ಆಲಮಟ್ಟಿ.

ಪಿ.ಡಿ.12

**ವಾಣಿಜ್ಯ ತೆರಿಗೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಎಂ.ಎಸ್.ಸಿ./ ಐ.ಓ./ಸಿ.ಆರ್.175/ 06-07, ದಿನಾಂಕ:3ನೇ ಜನವರಿ, 2007**

1. ಮಾಹಿತಿ ಹಕ್ಕು ಅಧಿನಿಯಮ, 2005 (2005ರ ಕೇಂದ್ರ ಕಾಯ್ದೆ ಸಂಖ್ಯೆ:22) ಅಡಿ ಈ ಹಿಂದೆ ಹೊರಡಿಸಲಾದ ಅಧಿಸೂಚನೆ-II, ಸಂಖ್ಯೆ: ಎಂ.ಎಸ್.ಸಿ: ಸಿಆರ್:55/05-06, ದಿನಾಂಕ:29ನೇ ಡಿಸೆಂಬರ್ 2006ನ್ನು ಮಾರ್ಪಡಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

2. ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 184 ಸಮಯ 2005, ದಿನಾಂಕ:22.09.2005ರ ಪ್ರಕಾರ ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿತವಾದ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯು 2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ಸಂಖ್ಯೆ:22)ರ ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಾಣಿಜ್ಯ ತೆರಿಗೆಗಳ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಗೆ ಕಾಣಿಸಿದ ಕೋಷ್ಟಕದ ಎರಡನೇ ಕಲಮಿನಲ್ಲಿ ನಮೂದಿಸಿದ ವಾಣಿಜ್ಯ ತೆರಿಗೆಗಳ ಇಲಾಖೆಯ ವಿವಿಧ ವೃಂದದ ಅಧಿಕಾರಿಗಳನ್ನು ಸಂಬಂಧಪಟ್ಟ ವಿಷಯಗಳ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು "ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ" ನೇಮಕ ಮಾಡಲಾಗಿದೆ.

3. ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5ರ ಉಪಕಲಂ 2ರನ್ವಯ ವಾಣಿಜ್ಯ ತೆರಿಗೆಗಳ ಇಲಾಖೆಯ ಆಯುಕ್ತರ ಕಛೇರಿಯ ವಾಣಿಜ್ಯ ತೆರಿಗೆ ಅಧಿಕಾರಿ (ವಾರ್ತಾಧಿಕಾರಿ) ಇವರನ್ನು ಆಯುಕ್ತರ ಕಛೇರಿಗೆ ಸಂಬಂಧಪಡುವ ವಿಷಯಗಳಿಗೆ ಮಾಹಿತಿ ಕೋರುವ ಅರ್ಜಿಗಳನ್ನು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ" ನೇಮಕ ಮಾಡಲಾಗಿದೆ.

4. ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಈ ಕೆಳಗೆ ಕಾಣಿಸಿದ ಕೋಷ್ಟಕದ ಮೂರನೇ ಕಲಮಿನಲ್ಲಿ ನಮೂದಿಸಿದ ಅಧಿಕಾರಿಗಳನ್ನು ಎರಡನೇ ಕಲಮಿನಲ್ಲಿ ಕಾಣಿಸಿದ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಆದೇಶಗಳ ಮೇಲೆ ಕಾಯ್ದೆಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಸಾರ್ವಜನಿಕ ಮಾಹಿತಿ ಅಧಿಕಾರಿಗಳು | ಮೇಲ್ಮನವಿ ಪ್ರಾಧಿಕಾರ |
|---|---|---|
| 1 | 2 | 3 |
| | **ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ** | |
| | ವಾಣಿಜ್ಯ ತೆರಿಗೆ ಉಪ ಆಯುಕ್ತರು (ಕೇಂದ್ರ ಕಛೇರಿ-1) | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, ಮಾನವ ಸಂಪನ್ಮೂಲ ಅಭಿವೃದ್ಧಿ. |
| | **ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಎಸ್.ಎಂ.ಆರ್.), ವಲಯ 1 ಮತ್ತು 2ರ ಕಛೇರಿ** | |
| | ವಲಯದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುಗಳು | ಸಂಬಂಧಪಟ್ಟ ವಲಯಗಳ ವಾಣಿಜ್ಯ ತೆರಿಗೆ ಅಪರ ಆಯುಕ್ತರು. |
| | **ಮನವಿ ವಿಭಾಗಗಳ ಕಛೇರಿಗಳು** | |
| 1. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಬೆಂಗಳೂರು ನಗರ ವಿಭಾಗ-1 ಮತ್ತು 3, ಬೆಂಗಳೂರು. | ವಾಣಿಜ್ಯ ತೆರಿಗೆ ಅಪರ ಆಯುಕ್ತರು, ವಲಯ 1, ಬೆಂಗಳೂರು. |
| 2. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಮಂಗಳೂರು ವಿಭಾಗ. | |
| 3. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಧಾರವಾಡ ವಿಭಾಗ. | |
| 4. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಬೆಳಗಾವಿ ವಿಭಾಗ. | |
| 5. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ದಾವಣಗೆರೆ ವಿಭಾಗ. | |
| 1. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಬೆಂಗಳೂರು ನಗರ ವಿಭಾಗ-2 ಮತ್ತು 4, ಬೆಂಗಳೂರು. | ವಾಣಿಜ್ಯ ತೆರಿಗೆ ಅಪರ ಆಯುಕ್ತರು, ವಲಯ 2, ಬೆಂಗಳೂರು. |
| 2. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಬೆಂಗಳೂರು ವಿಭಾಗ, ಬೆಂಗಳೂರು. | |
| 3. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಮೈಸೂರು ವಿಭಾಗ, ಮೈಸೂರು. | |
| 4. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಮಲೆನಾಡು ವಿಭಾಗ, ಶಿವಮೊಗ್ಗ. | |
| 5. | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮನವಿಗಳು), ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ. | |
| | ವಿಭಾಗೀಯ ಮೌಲ್ಯವರ್ಧಿತ ತೆರಿಗೆ, ಸ್ಥಿತ್ಯಂತರ, ಗುಪ್ತವಾರ್ತೆ, ಜಾಗೃತಿ ಮತ್ತು ಬೃಹತ್ ಪ್ರಮಾಣದ ವರ್ತಕರ ಘಟಕದ ವಿಭಾಗೀಯ ಕಛೇರಿಗಳು. | ಸಂಬಂಧಪಟ್ಟ ವಿಭಾಗದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು. |
| | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಾರ್ಯಾಲಯದಲ್ಲಿರುವ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಕೇಂದ್ರ ಕಛೇರಿ) ಅಥವಾ ಪತ್ರಾಂಕಿತ ವ್ಯವಸ್ಥಾಪಕರು. | |
| | ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ವಾಣಿಜ್ಯ ತೆರಿಗೆ ಅಧಿಕಾರಿಗಳು, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಮತ್ತು ವಾಣಿಜ್ಯ ತೆರಿಗೆ ಉಪ ಆಯುಕ್ತರುಗಳು. | |

**ಬಿ.ಎ. ಹರೀಶ್ ಗೌಡ**

ವಾಣಿಜ್ಯ ತೆರಿಗೆಗಳ ಆಯುಕ್ತರು.

## COMMERCIAL TAXES DEPARTMENT
## NOTIFICATION
### No. MSC/I.O/CR.175/06-07, Dated:3rd January, 2007

1. Notification II No.MSC/CR 55/05-06 Dated:29.12.2006 issued under the Right to Information Act, 2005 (Central Act No.22 of 2005) by the undersigned is hereby modified as under:

2. The undersigned, in modification of the above notification and by virtue of the powers vested in him under Section 5(1) of the Right to INformation Act, 2005 (Central Act No.22 of 2005) read with Government Notification No.ಆಇ 184 ಸಮಯ 2005 Dated:22.09.2005 hereby nominate the Officers as listed in the Column 2 of the table below as the "Public Information Officers".

3. The Commercial Tax Officer (Information), office of the Commissioner of Commercial Taxes, Bangalore is hereby nominated as the "Assistant Public Information Officer" as per Section 5(2) of the Right to Information Act, 2005 in sofar as the office of the Commissioner of Commercial Taxes is concerned to receive the applications from the concerned seeking information and to receive the appeal petitions.

4. The officers listed in Column 3 of the table below are nominated as the "Appellate Authorities" to exercise the powers conferred under Section 19(1) of the Right to Information Act, 2005.

**TABLE**

| Sl. No. | Public Information Officer | Appellate Authority |
|---|---|---|
| 1 | 2 | 3 |
| I. | Office of the Commissioner of Commercial Taxes, Bangalore.<br>Deputy Commissioner of Commercial Taxes (HQ-1), Bangalore. | Joint Commisssioner of Commercial Taxes (HRD) |
| II. | Office of the Addl. Commissioner of Commercial Taxes, Zone-I & II, Bangalore Asst. Commissioner of Commercial Taxes of respective Zones. | Addl. Commissioner of Commercial Taxes of respective Zones. |
| III. | **Divisional Appeal Offices**<br>1) Joint Commissioner of Commercial Taxes (Appeals) BCD-1 & 3, Bangalore.<br>2) Joint Commissioner of Commercial Taxes (Appeals) Mangalore Division, Mangalore.<br>3) Joint Commissioner of Commmercial Taxes (Appeals) Dharwad Division, Dharwad.<br>4) Joint Commissioner of Commmercial Taxes (Appeals) Belgaum Division, Belgaum.<br>5) Joint Commissioner of Commmercial Taxes (Appeals) Davanagere Division, Davanagere. | Addl. Commissioner of Commercial Taxes, Zone-1, Bangalore. |
| | 1) Joint Commissioner of Commmercial Taxes (Appeals) BCD-2 & 4, Bangalore.<br>2) Joint Commissioner of Commmercial Taxes (Appeals) Bangalore Dvn., Bangalore.<br>3) Joint Commissioner of Commmercial Taxes (Appeals) Mysore Dvn. Mysore.<br>4) Joint Commissioner of Commmercial Taxes (Appeals) Malnad Dvn. SHimoga.<br>5) Joint Commissioner of Commmercial Taxes (Appeals), Gulbarga Dvn. Gulbarga. | Addl. Commissioner of Commercial Taxes, Zone-11, Bangalore. |
| IV. | Divisional VAT, Transition, Intelligence, Vigilence, Investigation and Larger Dealers Units (LDU) Offices.<br>1) AC of CT (HQ) or Comml. Tax Officers (GM) of the respectives Offices.<br>2) All DC of CTs, AC of CTs and CTOs in their respective Jurisdictions. | Joint Commissioner of Commercial Taxes of respective Divisions. |

**B.A. HARISH GOWDA**
Commissioner of Commercial Taxes,
(Karnataka), Bangalore.

PR-51

**IN THE COURT OF THE CIVIL JUDGE (JR.DN) & JMFC., AT: KOPPAL**
**NOTIFICATION**
**C.C.No.200/ 2004/ (P.R.No.74/ 2004)**
**Cr.No.50/2003**
**No./ Accts/ 2007, Dated:**

**Munirabad P.S. V/s Venkatesh & Others**

**To,**
**The General Public**

The Kinetic Safari bearing No.KA-35/H-4655 is deposited by Munirabad Police in C.C. No.200/2004 (P.R.No.74/2004) Cr.No.50/2003 and the case is disposed off on 02.11.2004. Hence, any persons claiming the above property shall appear and claim the same after satisfying the Court of it sownership within 6 months of publication of this Gazette failing which the said vehicle will be confiscated to the State.

Given under my hand and seal of the Court, this 5th day of January, 2007.

Civil Judge (Jr.Dn.) & JMFC.,
Koppal.

PR-53

**DISTRICT AND SESSIONS JUDGE, BIDAR**
**RIGHT TO INFORMATION ACT-2005**
**FORM-II MONTHLY REPORT BY APPELLATE AUTHORITY TO PUBLIC AUTHORITY**

**From**
Name: Designation and address of
Appeallate Authority P. KRISHNA BHAT,
Tel No. Prl. District & Sessions Judge, Bidar.

**To**
Name: Designation and address of
Public Authority.

For the month of DECEMBER 2006 (From.................... to .............)

II-A] No. of appeals under consideration and charges collected.

| No. of pending appeals at the befinning of the month | No. of appeals received during this month | | | | | |
|---|---|---|---|---|---|---|
| | Through APIOs | Directly | Total (=b+c) | Of the total requests no. of appeals From BPL* citizens | Total No. of appeals for disposal upto the end of the month (=a+d) | Amount of charges collected during the month on appeals |
| (a) | (b) | (c) | (d) | (e) | (f) (=b+c+d+e) | (g) |
| | | | NIL | | | |

* Below Poverty Line.

II-B] No. of appeals disposed off.

| No. of appeals disposed off | | | | Appeals pending at the end of the month (=f-j) |
|---|---|---|---|---|
| within time Limit | After the time limit | total | | |
| (h) | (i) | (j) | (j+k) | (k) |
| | NIL | | | |

II-C] No. of appeals where order of SPIO denying access to information were upheld.

| No. of cases in which access to information was denied and orders of SPIO were upheld (whether in full or part) under RTI Act, Section No. | | | | | | | | | | | | | |
|---|---|---|---|---|---|---|---|---|---|---|---|---|---|
| 8(1) (a) | 8(1) (b) | 8(1) (c) | 8(1) (d) | 8(1) (e) | 8(1) (f) | 8(1) (g) | 8(1) (h) | 8(1) (i) | 8(1) (j) | 9 | 11 | Any other (give details) | Total |
| l | m | n | o | p | q | r | s | t | u | v | w | x | y |
| | | | | NIL | | | | | | | | | |

II-D] Suggestions if any (on removal of difficulties or on any other matter for operationalizing the right to access information).

Place: BIDAR.
Date:08.01.2007.

**P. KRISHNA BHAT**
Principal District and Sessions Judge,
Bidar.

**RIGHT TO INFORMATION ACT-2005**
**FORM-I MONTHLY REPORT BY SPIO TO PUBLIC AUTHORITY**

**From**
Name: Designation and address of
SPIO: Lakshminarasimha Murthy.
Tel No. C.A.O. District & Sessions Judge, Bidar.

**To**
Name: Designation and address of
Public Authority.

For the month of DECEMBER 2006 (From.................... to .............)

I-A] No. of request received and charges collected during the month.

| No. of requests pending at the befinning of the month | No. of requests received during this month | | | | | | |
|---|---|---|---|---|---|---|---|
| | Directly | Through post | Through APIOs | Through other public authorities | Total No. of requests received during the month | Of the total requests No of requests From BPL* citizens | Amount of charged collected during the month on |
| (a) | (b) | (c) | (d) | (e) | (f) (=b+c+d+e) | (g) | (h) |
| | | | NIL | | | | |

* Below Poverty Line.

I-B] No. of requests desposed off during the month.

| Total No. of requests for desposal up to the end of the | No. of requests disposed off the during the month | | | No. of request pending at the end of the month |
|---|---|---|---|---|
| | Within time Limit | After the time limit | Total | |
| (I) (=a+f) | (J) | (K) | (L) (j+k) | (M) (I-L) |
| | NIL | | | |

I-C] No. of requests where applicants were denied access to information alongwith relevant section of RTI Act, 2005.

| No. of cases in which access to information was denied (whether in full or part) under RTI Act, Section No. | | | | | | | | | | | | | |
|---|---|---|---|---|---|---|---|---|---|---|---|---|---|
| 8(1) (a) | 8(1) (b) | 8(1) (c) | 8(1) (d) | 8(1) (e) | 8(1) (f) | 8(1) (g) | 8(1) (h) | 8(1) (i) | 8(1) (j) | 9 | 11 | Any other (give details) | Total |
| n | o | p | q | r | s | t | u | v | w | x | y | z | zA |
| | | | | NIL | | | | | | | | | |

I-D] Suggestions if any (on removal of difficulties or on any other matter for operationalizing the right to access information).

Place: BIDAR.
Date:08.01.2007.

**LAKSHMINARASIMHA MURTHY**
Chief Administrative Officer,
District and Sessions Court, Bidar.

PR-54

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ. ಎಲ್.ಆರ್.ಎಫ್.(ಎನ್) ಸಿ.ಆರ್.: 7/ 06-07, ಬೆಂಗಳೂರು, ದಿನಾಂಕ:28ನೇ ಡಿಸೆಂಬರ್, 2006**

**ವಿಷಯ:** ಕಲ್ಪತರು ಎಜುಕೇಷನ್ ಸೊಸೈಟಿ (ರಿ) ನಂ.474, 3ನೇ ಕ್ರಾಸ್, 3ನೇ ಮೈನ್, ನಾಗಶೆಟ್ಟಿಹಳ್ಳಿ, ಬೆಂಗಳೂರು-94 ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಅಂದ್ರಹಳ್ಳಿ ಗ್ರಾಮದ ಸ.ನಂ.107/3 ರಲ್ಲಿ 1-14 ಎಕರೆ: ಗುಂಟೆ ಮತ್ತು 109/2 ರಲ್ಲಿ 0-26 ಗುಂಟೆ ಒಟ್ಟು 2-00 ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಅನುಮತಿ ಕೋರಿರುವ ಬಗ್ಗೆ.

ಕಲ್ಪತರು ಎಜುಕೇಷನ್ ಸೊಸೈಟಿ (ರಿ) ನಂ.474, 3ನೇ ಕ್ರಾಸ್, 3ನೇ ಮೈನ್, ನಾಗಶೆಟ್ಟಿಹಳ್ಳಿ, ಬೆಂಗಳೂರು-94 ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಅಂದ್ರಹಳ್ಳಿ ಗ್ರಾಮದ ಸ.ನಂ.107/3 ರಲ್ಲಿ 1-14 ಎಕರೆ: ಗುಂಟೆ ಮತ್ತು 109/ 2 ರಲ್ಲಿ 0-26 ಗುಂಟೆ ಒಟ್ಟು 2-00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಕ್ರಯಕ್ಕೆ ಮಾಡಿರುವ ಬೇಡಿಕೆ ಹಾಗೂ

ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ.ಎಲ್.ಆರ್.ಎಫ್. (1) ಸಿಆರ್ 188/ 06-07, ದಿನಾಂಕ:27.11.2006 ರಲ್ಲಿ ಪ್ರಸ್ತಾಪಿತ ಅಂದ್ರಹಳ್ಳಿ ಗ್ರಾಮದ ಸ.ನಂ.107/3 ರಲ್ಲಿ 1-14 ಎಕರೆ: ಗುಂಟೆ ಮತ್ತು 109/2 ರಲ್ಲಿ 0-26 ಗುಂಟೆ ಒಟ್ಟು 2-00 ಎಕರೆ ಜಮೀನನ್ನು ಕ್ರಯಕ್ಕೆ ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘಗಳ ರಿಜಿಸ್ಟ್ರಾರ್, ಬೆಂಗಳೂರು ನಗರ ಜಿಲ್ಲೆ, ರವರ ನೋಂದಣಿ ಸಂಖ್ಯೆ: 1118/ 2002-03, ದಿನಾಂಕ:20.02.2003 ರಂದು ನೊಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರತಾಲ್ಲೂಕು, ಯಶವಂತಪುರ ಹೋಬಳಿ, ಅಂದ್ರಹಳ್ಳಿ ಗ್ರಾಮದ ಸ.ನಂ.107/3 ರಲ್ಲಿ 1-14 ಎಕರೆ: ಗುಂಟೆ ಮತ್ತು 109/2ರಲ್ಲಿ 0-26 ಗುಂಟೆ ಒಟ್ಟು 2-00 ಎಕರೆ ಜಮೀನನ್ನು ಕಲ್ಪತರು ಎಜುಕೇಷನ್ ಸೊಸೈಟಿ (ರಿ) ನಂ.474, 3ನೇ ಕ್ರಾಸ್, 3ನೇ ಮೈನ್, ನಾಗಶೆಟ್ಟಿಹಳ್ಳಿ, ಬೆಂಗಳೂರು-94 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ.ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.57

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

## ನಂ. ಎಲ್.ಆರ್.ಎಫ್.(ಪೂ) ಸಿ.ಆರ್.: 08/ 06-07, ಬೆಂಗಳೂರು, ದಿನಾಂಕ:26ನೇ ಡಿಸೆಂಬರ್, 2006

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ತೂಬರಹಳ್ಳಿ ಗ್ರಾಮದ ಸ.ನಂ. 58/1 ರಲ್ಲಿನ 1-36 ಎಕರೆ/ ಗುಂಟೆ ವಿಸ್ತೀರ್ಣದ ಜಮೀನಿಗೆ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸಲು ಮೆ: ಕೆ.ಜೆ.ಫೌಂಡೇಷನ್ ಟ್ರಸ್ಟ್ ರವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ:67 ಶಾಸನ 2003, ಬೆಂಗಳೂರು ದಿನಾಂಕ:10.03.2004.

2. ತಹಶೀಲ್ದಾರ್ ಬೆಂಗಳೂರು ಪೂರ್ವ ತಾಲ್ಲೂಕುರವರ ಪತ್ರ ಸಂಖ್ಯೆ: ಎಲ್‌ಆರ್‌ಎಫ್:ಸಿ.ಆರ್.28/ 06-07, ದಿನಾಂಕ:23.12.2006.

ಕೆ.ಜೆ. ಫೌಂಡೇಷನ್ ಟ್ರಸ್ಟ್, ನಂ.ಎ-003, ಕೃಷ್ಣ ಲೀಲಾಕ್ ಅಪಾರ್ಟ್‌ಮೆಂಟ್ಸ್, ಸರ್ಜಾಪುರ ರಸ್ತೆ, ಬೆಂಗಳೂರು ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ತೂಬರಹಳ್ಳಿ ಗ್ರಾಮದ ಸ.ನಂ.58/1 ರಲ್ಲಿನ 1-36 ಎಕರೆ/ ಗುಂಟೆ, ವಿಸ್ತೀರ್ಣದ ವ್ಯವಸಾಯದ ಜಮೀನನ್ನು ಶೈಕ್ಷಣಿಕ ಚಟುವಟಿಕೆಗಳ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 (i) (ii)ರಡಿ ಕ್ರಯಕ್ಕೆ ಪಡೆಯಲು ನಮೂನೆ-15ಎ ರಲ್ಲಿ ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎಎ ರಲ್ಲಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರು ಸಲ್ಲಿಸಿರುವ ಚೆಕ್ ಲಿಸ್ಟ್‌ನಲ್ಲಿ ನೀಡಿದ ಮಾಹಿತಿ ಅನುಸರಿಸಿ, ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ.ಎಲ್.ಆರ್.ಎಫ್.:ಸಿ.ಆರ್.227/ 06-07 ದಿನಾಂಕ: 28.10.2006ರಲ್ಲಿನ ಪ್ರಸ್ತಾನೆಯಂತೆ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ತೂಬರಹಳ್ಳಿ ಗ್ರಾಮದ ಸ.ನಂ.58/1 ರಲ್ಲಿನ

1-36 ಎಕರೆ/ ಗುಂಟೆ ವಿಸ್ತೀರ್ಣದ ವ್ಯವಸಾಯದ ಜಮೀನನ್ನು ಕ್ರಯಕ್ಕೆ ಪಡೆಯಲು ಮೆ: ಇನ್‌ವೆಂಚರ್ ಎಜುಕೇಷನ್ ಪ್ರೈ.ಲಿ., ಸಹೋದರ ಸಂಸ್ಥೆಯಾದ ಮೆ: ಕೆ.ಜೆ. ಫೌಂಡೇಷನ್ ಟ್ರಸ್ಟ್‌ಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i) (ii)ರಡಿ ಅನುಮತಿ ನೀಡಲು ವರದಿ ಮಾಡಿರುತ್ತಾರೆ.

ಸದರಿ ಸಂಸ್ಥೆಯು ಹಿರಿಯ ಉಪನೋಂದಣಾಧಿಕಾರಿಗಳು, ಬೆಂಗಳೂರು ದಕ್ಷಿಣ ತಾಲ್ಲೂಕುರವರ ಕಛೇರಿಯಲ್ಲಿ ನಂ.620/ 2006-07 ದಿನಾಂಕ:12.09.2006 ರಂದು ನೊಂದಾಯಿಸಲ್ಪಟ್ಟಿದ್ದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವತಾಲ್ಲೂಕು, ವರ್ತೂರು ಹೋಬಳಿ, ತೂಬರಹಳ್ಳಿ ಗ್ರಾಮದ ಸ.ನಂ.58/1 ರಲ್ಲಿನ 1-36 ಎಕರೆ/ ಗುಂಟೆ ವಿಸ್ತೀರ್ಣದ ಜಮೀನನ್ನು ಮೆ: ಕೆ.ಜೆ. ಫೌಂಡೇಷನ್ ಟ್ರಸ್ಟ್‌ರವರಿಗೆ ಶೈಕ್ಷಣಿಕ ಚಟುವಟಿಕೆಗಳ ಉದ್ದೇಶಕ್ಕಾಗಿ ಕ್ರಯದ ರೂಪದಲ್ಲಿ ಟ್ರಸ್ಟ್ ಜಮೀನು ಹೊಂದಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ:67 ಶಾಸನ 2003, ಬೆಂಗಳೂರು ದಿನಾಂಕ:10.03.2004ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳವರೆಗೆ ಜಮೀನುಗಳನ್ನು ಟ್ರಸ್ಟ್ ಹೊಂದಲು ಅನುಮತಿ ನೀಡುವ ಅಧಿಕಾರ ಜಿಲ್ಲಾಧಿಕಾರಿಗಳಿಗೆ ಕಲ್ಪಿಸಿದೆ. ಅದರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಟ್ರಸ್ಟ್‌ಗೆ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳಿದ್ದಲ್ಲಿ ಸಕ್ರಮಗೊಳಿಸಿಕೊಳ್ಳುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಪ್ರಾಧಿಕಾರದಿಂದ 2 ಯೂನಿಟ್‌ಗಿಂತ ಹೆಚ್ಚಾಗಿ ಟ್ರಸ್ಟ್ ಜಮೀನು ಹೊಂದಲು ಅನುಮತಿ ಪಡೆದುಕೊಂಡಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ಸೇರಿದಂತೆ ಹಾಗೂ ಅಕ್ರಮವೆನಿಸಿದ ದಾಖಲೆಗಳ ಮೂಲಕ ಅನುಮತಿ ಪಡೆದಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ತನಗೆ ತಾನೇ ರದ್ದುಗೊಳ್ಳುತ್ತದೆ.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
8. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.58

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

## ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅನ್ವಯ ಅಧಿಸೂಚನೆಯ

## ಕ್ರಮಾಂಕ: ಕಗೃಮಂ: ಭೂಸ್ವಾವಿ:8/ 2006-07, ದಿನಾಂಕ:13ನೇ ಡಿಸೆಂಬರ್, 2006

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಗೃಹ ಮಂಡಳಿಯ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2) ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಚಲಾಯಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರಿ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ಶಿವಮೊಗ್ಗ ತಾಲ್ಲೂಕು: ಶಿಕಾರಿಪುರ ಹೋಬಳಿ: ಹೊಸೂರು ಗ್ರಾಮ: ದೂಪದಹಳ್ಳಿ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಿಕ್ಕುಬಂದಿ | | | | ವಿಸ್ತೀರ್ಣ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಮೋಹನ್ ಬಿನ್ ಹುಚ್ಚರಾಯಪ್ಪ, ಗಾಯಿತ್ರಮ್ಮ ಕೋಂ ಬಿ.ಯೋಗರಾಜಪ್ಪ, ಚಾಮರಾಜ ಬಿನ್ ಅಡಿವೇಶಪ್ಪ, ಸೈಯದ್ ಬಾಷ ಸಾಬ್ ಬಿನ್ ಸೈಯದ್ ಯುಸುಫ್ ಸಾಬ್. | ಮೋಹನ್, ಗಾಯಿತ್ರಮ್ಮ ಚಾಮರಾಜ, ಸೈಯದ್ ಬಾಷಾ ಸಾಬ್ ಯುಸುಫ್ ಸಾಬ್. | 90 | ತರಿ | 105 | 105 | 105 | 105 | 5-22 0-09ಖ | 15-46 |
| 2. | ಅರ್ಜುನಪ್ಪ ಬಿನ್ ಖೇರೋಜ, ದುರ್ಗಮ್ಮ ಕೋಂ ರಾಜಪ್ಪ. | ಅರ್ಜುನಪ್ಪ ಬಿನ್ ಖೆರೋಜದುರ್ಗಮ್ಮ ಕೋಂ ರಾಜಪ್ಪ ಸರ್ಜಿಮುಲ್‌ಜೀ | 99 | ತರಿ | 100 | 98 | ಹಳಿಯೂರು ಗಡಿ | ರಸ್ತೆ | 2-12 | 13-71 |
| 3. | ಷಾ ಸೂರಪ್‌ಮೆಲ್ ಜೀ ಬಿನ್ ರಾಮಜೀ | ಸರ್ಜಿಮುಲ್‌ಜೀ | 100/1A | ತರಿ | 101 | 99 | ಹಳಿಯೂರು ಗಡಿ | ರಸ್ತೆ | 1.01 | 6-00 |
| 4. | ಟಿ.ಆರ್. ಪ್ರಭಾಕರ್ ಬಿನ್ ಟಿ.ರಾಮಯ್ಯ | ಟಿ.ಆರ್. ಪ್ರಭಾಕರ್ | 100/1B | ತರಿ | 101 | 99 | ಹಳಿಯೂರು ಗಡಿ | ರಸ್ತೆ | 1-00 | 6-00 |
| 5. | ವಿಜಯಕುಮಾರ್ ಬಿನ್ ಸುರೋಬರಾವ್ ಉಮೇಶ್, ಪ್ರಕಾಶ ಬಿನ್ ಕೃಷ್ಣೋಜಿ ರಾವ್ ರೇಣುಕಾ ಕೋಂ ಕೃಷ್ಣೋಜಿರಾವ್. | ಎಸ್.ಪಿ. ಕೃಷ್ಣೋಜಿರಾವ್, ವಿಜಯ್‌ಕುಮಾರ್ | 100/2P | ತರಿ | 101 | 99 | ಹಳಿಯೂರು ಗಡಿ | ರಸ್ತೆ | 0-22 | 3-13 |
| 6. | ಷಾ ಸೂರಜ್ ಮಲ್‌ಜೀ ಬಿನ್ ರಾಮ್‌ಜೀ | ಷಾಸೂರಜ್ ಮೆಲ್ ಜೀ ಬಿನ್ ರಾಮ್‌ಜೀ | 100/3 | ತರಿ | 101 | 99 | ಹಳಿಯೂರು ಗಡಿ | ರಸ್ತೆ | 1.06 | 7-00 |
| 7. | ಶಿವಪ್ಪ, ಕರಿಯಪ್ಪ, ಲೋಕೇಶಪ್ಪ, ಚಂದ್ರಪ್ಪ ಬಿನ್ ದೊಡ್ಡಪ್ಪ | ಶಿವಪ್ಪ, ಕರಿಯಪ್ಪ, ಲೋಕೇಶಪ್ಪ, ಚಂದ್ರಪ್ಪ. | 101/1 | ತರಿ | 102 | 100 | ಹಳಿಯೂರು ಗಡಿ | ರಸ್ತೆ | 1.08 | 6-00 |
| 8. | ಶಿವಪ್ಪ ಕರಿಯಪ್ಪ, ಲೋಕೆಶಪ್ಪ, ಚಂದ್ರಪ್ಪ ಬಿನ್ ದೊಡ್ಡಪ್ಪ | ಶಿವಪ್ಪಕರಿಯಪ್ಪ ಲೋಕೇಶಪ್ಪ, ಚಂದ್ರಪ್ಪ ಜಂಟಿ | 101/2 | ತರಿ | 102 | 100 | ಹಳಿಯೂರು ಗಡಿ | ರಸ್ತೆ | 0.09 | 1-22 |
| 9. | ಶಿವಪ್ಪ ಕರಿಯಪ್ಪ, ಲೋಕೆಶಪ್ಪ, ಚಂದ್ರಪ್ಪ ಬಿನ್ ದೊಡ್ಡಪ್ಪ. | ಶಿವಪ್ಪಕರಿಯಪ್ಪ, ಲೋಕೆಶಪ್ಪ | 101/3 | ತರಿ | 102 | 100 | ಹಳಿಯೂರು ಗಡಿ | ರಸ್ತೆ | 0.06 | 1-00 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 10. | ಶಿವಪ್ಪ, ಕರಿಯಪ್ಪ, ಲೋಕೇಶಪ್ಪ, ಚಂದ್ರಪ್ಪ ಬಿನ್ ದೊಡ್ಡಪ್ಪ | ಶಿವಪ್ಪ, ಕರಿಯಪ್ಪ, ಲೋಕೆಶಪ್ಪ, ಚಂದ್ರಪ್ಪ | 101/4 | ತರಿ | 102 | 100 | ಹಳಿಯೂರು ಗಡಿ | ರಸ್ತೆ | 0.07 | 1-00 |
| 11. | ಶಿವಪ್ಪ, ಕರಿಯಪ್ಪ, ಲೋಕೇಶಪ್ಪ, ಚಂದ್ರಪ್ಪ ಬಿನ್ ದೊಡ್ಡಪ್ಪ | ಶಿವಪ್ಪ, ಕರಿಯಪ್ಪ, ಲೋಕೇಶಪ್ಪ, ಚಂದ್ರಪ್ಪ | 101/5 | ತರಿ | 102 | 100 | ಹಳಿಯೂರು ಗಡಿ | ರಸ್ತೆ | 0.07 | 1-00 |
| 12. | ಸೈಯದ್ ಬಾಷ ಸಾಬ್ ಬಿನ್ ಸೈಯದ್ ಯುಸರಫ್ ಸಾಬ್ | ಸೈಯದ್ ಬಾಷಸಾಬ್ | 101/6 | ತರಿ | 102 | 100 | ಹಳಿಯೂರು ಗಡಿ | ರಸ್ತೆ | 1.00 | 5-40 |
| 13. | ಶಿವಪ್ಪ, ಕರಿಯಪ್ಪ, ಲೋಕೇಶಪ್ಪ, ಚಂದ್ರಪ್ಪ ಬಿನ್ ದೊಡ್ಡಪ್ಪ. | ಶಿವಪ್ಪ, ಕರಿಯಪ್ಪ, ಲೋಕೇಶಪ್ಪ, ಚಂದ್ರಪ್ಪ, ಸೈಯದ್ ಇಮಾಮ್‌ಸಾಬ್ | 101/7 | ತರಿ | 102 | 100 | ಹಳಿಯೂರು ಗಡಿ | ರಸ್ತೆ | 0.07 | 1-00 |
| 14. | ಸೈಯದ್ ಇಮಾಮ್ ಸಾಬ್ ಬಿನ್ ಸೈಯದ್ ಹುಸೇನ್ ಸಾಬ್ | ಸೈಯದ್‌ಇಮಾಮ್ ಸಾಬ್ | 102/1 | ತರಿ | 103 | 101 | ಹಳಿಯೂರು ಗಡಿ | ರಸ್ತೆ | 1.10 | 7-13 |
| 15. | ಸೈಯದ್ ಬಾಷ ಸಾಬ್ ಬಿನ್ ಸೈಯದ್ ಯುಸುಫ್ ಸಾಬ್ | ಸೈಯದ್ ಬಾಷ ಸಾಬ್ | 102/3 | ತರಿ | 103 | 101 | ಹಳಿಯೂರು ಗಡಿ | ರಸ್ತೆ | 1.00 | 5-70 |
| 16. | ದುರ್ಗಮ್ಮ ಕೋಂ ರಾಜಪ್ಪ | ದುರ್ಗಮ್ಮ | 103/1 | ತರಿ | 104 | 102 | ಹಳಿಯೂರು ಗಡಿ | 90 | 2.07 | 12-00 |
| 17. | ಕೆ. ದೇವೇಂದ್ರಪ್ಪ ಬಿನ್ ಮಹದೇವಪ್ಪ | ಕೆ.ದೇವೇಂದ್ರಪ್ಪ | 103/P2 | ತರಿ | 104 | 102 | ಹಳಿಯೂರು ಗಡಿ | 90 | 2.06 | 12-00 |
| 18. | ಮೋಹನ್ ಬಿನ್ ಹುಚ್ಚರಾಯಪ್ಪ | ಮೋಹನ್ | 104/1 | ತರಿ | 1054 | 103 | ಹಳಿಯೂರು ಗಡಿ | 90 | 2.06 | 12-00 |
| 19. | ಮೋಹನ್ ಬಿನ್ ಹುಚ್ಚರಾಯಪ್ಪ | ಮೋಹನ್ | 104/2 | ತರಿ | 105 | 103 | ಹಳಿಯೂರು ಗಡಿ | 90 | 2.30 | 15-00 |
| 20. | ಸಿದ್ದಪ್ಪ ಬಿನ್ ಚಿಕ್ಕಪ್ಪ, ಬಿ.ಜಯರಾಮ ಬಿನ್ ಹುಚ್ಚರಾಯಪ್ಪ, ಸುಲೋಚನಮ್ಮ ಕೋಂ ಜಯರಾಮ | ಸಿದ್ದಪ್ಪ ಬಿನ್ ಚಿಕ್ಕಪ್ಪ, ಬಿ. ಜಯರಾಮ, ಸುಲೋಚನಮ್ಮ | 105/2 | ತರಿ | 104, 90 | 106 | ಹಳಿಯೂರು ಗಡಿ | 89 | 2-366 0-01ಖ | 14-03 |
| 21. | ಸಿದ್ದಪ್ಪ ಬಿನ್ ಮಾದಪ್ಪರ ಚಿಕ್ಕಪ್ಪ, ಬಿ.ಜಯರಾಮ, ಸುಲೋಚನಮ್ಮ. | ಸಿದ್ದಪ್ಪ ಚಿಕ್ಕಪ್ಪ, ಬಿ.ಜಯರಾಮ, ಸುಲೋಚನಮ್ಮ. | 106/1 | ತರಿ | 108 | 105 | 107 | 88 | 2-24 0-01ಖ | 13-16 |
| 22. | ನಿಂಗಮ್ಮ ಬಿನ್ ಶಿವಪ್ಪ ಗೌಡ | ನಿಂಗಮ್ಮ | 106/2 | ತರಿ | 108 | 105 | 107 | 88 | 3.06 0-01ಖ | 15-35 |
| 23. | ಮೊಹಮ್ಮದ್ ಹುಸೇನ್ ಸಾಬ್ ಬಿನ್ ಇಮಾಮ್ ಸಾಬ್ | ಮೊಹಮ್ಮದ್ ಹುಸೇನ್ ಸಾಬ್ ಬಿನ್ ಇಮಾಮ್ ಸಾಬ್ | 107 | ತರಿ | 108 | ಹಳಿಯೂರು ಗಡಿ | 113 | 106 | 1.32 | 10-00 |
| 24. | ಶ್ರೀರಂಗನಾಥ ದೇವರು, ಗುರುಶಾಂತಪ್ಪ, ಗೌರಮ್ಮ ಕೋಂ ಪರಮೇಶ್ವರಪ್ಪ | ಗುರುಶಾಂತಪ್ಪ, ಗೌರಮ್ಮ | 108/1 | ತರಿ | 109 | 106, 107 | 113 | 88 | 3-26 0-01ಖ | 17-75 |
| 25. | ಸಿದ್ದಮ್ಮ ಕೋಂ ಮಹದೇವಪ್ಪ | ಸಿದ್ದಮ್ಮ | 108/2A | ತರಿ | 109 | 106, 107 | 113 | 88 | 0.31 | 4-43 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 26. | ಯೋಗೇಶಪ್ಪ ಬಿನ್ ನಿಂಗಪ್ಪ | ಯೋಗೇ ಶಪ್ಪ | 108/2B | ತರಿ | 109 | 106, 107 | 113 | 88 | 3.25 0-01ಖ | 19-74 |
| 27. | ಗೌರವ್ವ ಕೋಂ ಬಸವಣಪ್ಪ | ಗೌರವ್ವ | 109/1P | ತರಿ | 109 | 106, 107 | 113 | 88 | 1.01 0-01ಖ | 6-00 |
| 28. | ನಾಗರಾಜಪ್ಪ ಬಿನ್ ಬಸವಣಪ್ಪ | ನಾಗರಾಜಪ್ಪ | 109/1P 1 | ತರಿ | 110 | 108 | 112, 113 | 88 | 1.15 | 7-68 |
| 29. | ಸುರೇಶ್ ಬಿನ್ ಬಸವಣಪ್ಪ | ಸುರೇಶ್ | 109/1P 2 | ತರಿ | 110 | 108 | 112, 113 | 88 | 1.15 | 7-68 |
| 30. | ಆರ್. ಗಣೇಶಪ್ಪ ಬಿನ್ ಮರಿಬಸಪ್ಪ | ಆರ್. ಗಣೇಶಪ್ಪ | 109/2 | ತರಿ | 110 | 108 | 112,113 | 88 | 3.02 0-01ಖ | 17-00 |
| 31. | ಮಲ್ಲಪ್ಪ ಬಿನ್ ಹೊಳೆಯಪ್ಪ | ಮಲ್ಲಪ್ಪ | 109/3 | ತರಿ | 110 | 108 | 112,113 | 88 | 1.16 | 7-98 |

**ಘೋಷ್ವಾರೆ**

| | |
|---|---|
| ತರಿ | 52-35 |
| ಖರಾಬ್ | 0-16 |
| ಒಟ್ಟು | 53-11 |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿ.ಡಿ.13

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

**ಸಂಖ್ಯೆ: ಇಇ/ ಬೆಂ.ಬೃ.ಕಾ.ಉ.ವಿ./ ಎಇಇ-4/ ಕ-/06-07/173335, ದಿನಾಂಕ:16ನೇ ಅಕ್ಟೋಬರ್, 2006**

ಕ.ವಿ.ಪ್ರ.ನಿ.ನಿ.ಯು 1948ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 28ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 29(II) ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕ ತಿಳುಗಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

1) **ಯೋಜನೆಯ ಹೆಸರು:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕು ಅಗಲಕೋಟೆ ಹ್ಯಾಂಡ್ ಪೋಸ್ಟ್ (ಹುಲಿಕಟ್ಟೆ) ವ್ಯಾಪ್ತಿಯಲ್ಲಿ, 1x8 ಎಂ.ವಿ.ಎ. 66/11 ಕೆ.ವಿ. ವಿದ್ಯುತ್ ಉಪಕೇಂದ್ರವನ್ನು ಸ್ಥಾಪಿಸುವ ಸಂಬಂಧ ಕೆಂಪನಹಳ್ಳಿ ವಿದ್ಯುತ್ ವಿತರಣಾ ಕೇಂದ್ರದಿಂದ ಉದ್ದೇಶಿತ 66/11 ಕೆ.ವಿ. ಅಗಲಕೋಟೆ ಹ್ಯಾಂಡ್ ಪೋಸ್ಟ್ (ಹುಲಿಕಟ್ಟೆ) ಉಪಕೇಂದ್ರಕ್ಕೆ ಸುಮಾರು 10.369 ಕಿ.ಮೀ. 66 ಕೆ.ವಿ. ಮಾರ್ಗ ನಿರ್ಮಾಣ ಮಾಡುವುದು.

2) **ಯೋಜನೆಯ ಪ್ರಯೋಜನಗಳು:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕು ಅಗಲಕೋಟೆ ಹ್ಯಾಂಡ್ ಪೋಸ್ಟ್ (ಹುಲಿಕಟ್ಟೆ), ಮತ್ತು ಸುತ್ತಮುತ್ತಲಿನ ಗ್ರಾಮಗಳಿಗೆ ಉತ್ತಮ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

3) **66 ಕೆ.ವಿ. ಮಾರ್ಗ ಹಾದುಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು:**

ಅ. ಹುಲಿಕಟ್ಟೆ, ಹಲಸಬೆಲೆ, ನಾಗಸಹಳ್ಳಿ, ದಾಸನಪುರ, ಯಡಹಳ್ಳಿ, ಅಂದಾನಿಗೌಡನಪಾಳ್ಯ, ಹುಸೆಕುಪ್ಪೆ, ಸಿದ್ದರಾಮಯ್ಯನಪಾಳ್ಯ, ಕಡೇಸಿಂಗನಹಳ್ಳಿ, ತಿಟ್ಟನಪಾಳ್ಯ, ಹೊಸಕೆರೆ, ಕೆಂಪನಹಳ್ಳೀ ಮತ್ತು ಇತರೆ ಹಳ್ಳಿಗಳು.

4) **ಅಂದಾಜು ವೆಚ್ಚ:** ರೂ. 404.12 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (111)ರ (ಕೇಂದ್ರೀಯ ಕಾಯ್ದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳುಹಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ (ವಿ),
ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ,
ಕ.ವಿ.ಪ್ರ.ನಿ.ನಿ. ಬೆಂಗಳೂರು-09.

ಪಿ.ಡಿ.14

## ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ, ಮಂಗಳೂರು ಕವಿಪ್ರನಿನಿ., ಕಾವೂರು, ಮಂಗಳೂರು

**ಸಂಖ್ಯೆ: ಕಾನಿಇಂ/ ಬೃಕಾವಿ/ ಮಂ/ ಸಕಾನಿಇಂ(ಕ)/ 4271, ದಿನಾಂಕ:25ನೇ ಅಕ್ಟೋಬರ್, 2006**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, 1948ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಸೆಕ್ಷನ್ 28(1)ರ ಅನ್ವಯ ಈ ಕೆಳಕಂಡ ಯೋಜನೆಯನ್ನು ರೂಪಿಸಿರುತ್ತದೆ ಮತ್ತು ಅದನ್ನು ಮೇಲೆ ತಿಳಿಸಿರುವ ಕಾಯ್ದೆಯ ಸೆಕ್ಷನ್ 28(3)ರ ಅನ್ವಯ ಸಂಬಂಧಪಟ್ಟ ವ್ಯಕ್ತಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

**1) ಯೋಜನೆಯ ಹೆಸರು:** ದಕ್ಷಿಣಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕಿನಲ್ಲಿ ಸ್ಥಾಪಿಸಲು ಉದ್ದೇಶಿಸಿರುವ 1x10 ಎಂ.ವಿ.ಎ. 110/11 ಕೆ.ವಿ. ಸಾಲೆತ್ತೂರು ವಿದ್ಯುತ್ ಉಪಕೇಂದ್ರಕ್ಕೆ ಹಾಲಿ ಇರುವ 110 ಕೆವಿ ಬಿ.ಸಿ. ರೋಡ್, ವಿಟ್ಲ ಏಕ ವಿದ್ಯುತ್ ಪ್ರಸರಣಾ ಮಾರ್ಗದಿಂದ 110 ಕೆವಿ ಲಿಲೋ ಪ್ರಸರಣಾ ಮಾರ್ಗದ ನಿರ್ಮಾಣ.

**2) ಪ್ರಮುಖ ಲಕ್ಷಣಗಳು:** ಸಾಂಪ್ರದಾಯಿಕವಾದ ಜಿ.ಐ. ಲ್ಯಾಟೀಸ್ ಮಾದರಿಯ ಗೋಪುರಗಳ ಮೇಲೆ ಲಿಂಕ್ಸ್ ಎ.ಸಿ.ಎಸ್.ಆರ್. ವಾಹಕವನ್ನು ಉಪಯೋಗಿಸಿ, ಸುಮಾರು 0.664 ಕಿ.ಮೀ. ಉದ್ದದ ಪ್ರಸ್ತಾವಿತ 110 ಕೆವಿ ಲಿಲೋ ವಿದ್ಯುತ್ ಪ್ರಸರಣಾ ಮಾರ್ಗದ ನಿರ್ಮಾಣ.

**3) ಹಾದು ಹೋಗುವ ಪ್ರದೇಶಗಳು:** ಬಂಟ್ವಾಳ, ಸಾಲೆತ್ತೂರು ಪ್ರದೇಶಗಳಿಗೆ ಉತ್ತಮ ಗುಣಮಟ್ಟದ ಹಾಗೂ ನಿರಂತರ ವಿದ್ಯುತ್ ಸರಬರಾಜು ಮತ್ತು ಸುತ್ತಮುತ್ತಲಿನಲ್ಲಿ ಬೆಳೆಯುತ್ತಿರುವ ವಿದ್ಯುತ್ ಬೇಡಿಕೆಯನ್ನು ಪೂರೈಸುವ ಸಲುವಾಗಿ ಕೈಗೊಳ್ಳಲಾದ ಈ ಪ್ರಸ್ತಾವಿತ ವಿದ್ಯುತ್ ಮಾರ್ಗವು 22 ಮೀಟರ್ ಕಾರಿಡಾರ್ ಅಗಲವನ್ನು ಹೊಂದಿದ್ದು, ದಕ್ಷಿಣಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಕೋಲ್ನಾಡು ಗ್ರಾಮದ ಮಿತಿಯಲ್ಲಿ ಹಾದು ಹೋಗುತ್ತದೆ.

**4) ಪ್ರಸರಣ ಮಾರ್ಗದ ಮತ್ತು ವಿದ್ಯುತ್ ಕೇಂದ್ರದ ಅಂದಾಜು ಮೌಲ್ಯ:** ಸಾಮಗ್ರಿ ಮತ್ತು ಲೇಬರ್ ವೆಚ್ಚ ಸೇರಿಸಿ ಅಂದಾಜು 60.57 ಲಕ್ಷ ರೂಪಾಯಿಗಳು.

ಮೇಲೆ ತಿಳಿಸಿರುವ ಯೋಜನೆಯನ್ನು ಕಾರ್ಯಗತಗೊಳಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಭಾರತೀಯ ಟೆಲಿಗ್ರಾಫಿಕ್ ಕಾಯ್ದೆ 1985 (1885ರ 18) ಅಧಿನಿಯಮ ಭಾಗ-III ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಮೇಲಿನ ಪ್ರಸ್ತಾವಿತ ಯೋಜನೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ ಎರಡು ತಿಂಗಳೊಳಗಾಗಿ ಈ ಕೆಳಗಿನ ಕಛೇರಿಗೆ ಕಳೂಹಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರ (ವಿದ್ಯುತ್),
ಬೃಹತ್ ಕಾಮಗಾರಿ ವಿಭಾಗ, ಮಂಗಳೂರು,
ಕ.ವಿ.ಪ್ರ.ನಿ.ನಿ. ಕಾವೂರು, ಮಂಗಳೂರು.

ಪಿ.ಡಿ.15

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

### ಸಂಖ್ಯೆ: ಇಇಇ/ ಬೆಂ.ಬೃ.ಕಾ.ಉ.ವಿ./ ಎಇಇ-4/ ಕ-/06-07/1738-40, ದಿನಾಂಕ:16ನೇ ಅಕ್ಟೋಬರ್, 2006

ಕ.ವಿ.ಪ್ರ.ನಿ.ನಿ.ಯು 1948ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 28ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 29(II) ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕ ತಿಳುಗಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

**1) ಯೋಜನೆಯ ಹೆಸರು:** ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲ್ಲೂಕು ಬೂದಿಗೆರೆ ವ್ಯಾಪ್ತಿಯಲ್ಲಿ, 2x8 ಎಂ.ವಿ.ಎ. 66/11 ಕೆ.ವಿ. ವಿದ್ಯುತ್ ಉಪಕೇಂದ್ರವನ್ನು ಸ್ಥಾಪಿಸುವ ಸಂಬಂಧ ಬೇಗೂರು/ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ವಿದ್ಯುತ್ ಸ್ವೀಕರಣಾ ಕೇಂದ್ರದಿಂದ ಉದ್ದೇಶಿತ 66/11 ಕೆ.ವಿ. ಬೂದಿಗೆರೆ ಉಪಕೇಂದ್ರಕ್ಕೆ ಸುಮಾರು 8.5 ಕಿ.ಮೀ.66 ಕೆ.ವಿ. ಮಾರ್ಗ ನಿರ್ಮಾಣ ಮಾಡುವುದು.

**2) ಯೋಜನೆಯ ಪ್ರಯೋಜನಗಳು:** ಬೆಂಗಳೂರು ಬೂದಿಗೆರೆ ಗ್ರಾಮ ಮತ್ತು ಸುತ್ತಮುತ್ತಲಿನ ಗ್ರಾಮಗಳಿಗೆ ಉತ್ತಮ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

**3) 66 ಕೆ.ವಿ. ಮಾರ್ಗ ಹಾದುಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು:**

ಅ. ಬೇಗೂರು/ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ವಿದ್ಯುತ್ ಸ್ವೀಕರಣಾ ಕೇಂದ್ರ ಹಾಗೂ ಸುತ್ತಮುತ್ತಲ ಪ್ರದೇಶಗಳು, ಬಂಡಕೊಡಿಗೇನಹಳ್ಳಿ, ಹರೆಬಿನ್ನಮಂಗಲ, ಮಹಾದೇವಕೊಡಿಗೇನಹಳ್ಳಿ, ಮರಿಚಿಪ್ಪನಹಳ್ಳಿ ಮತ್ತು ಬೂದಿಗೆರೆ.

**4) ಅಂದಾಜು ವೆಚ್ಚ:** ರೂ. 752.45 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (III)ರ (ಕೇಂದ್ರೀಯ ಕಾಯ್ದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳೂಹಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ (ವಿ),
ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ,
ಕ.ವಿ.ಪ್ರ.ನಿ.ನಿ. ಬೆಂಗಳೂರು-09.

ಪಿ.ಡಿ.16

## ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ, (ಉಡುಪಿ) ಕವಿಪ್ರನಿನಿ., ಕಾವೂರು, ಮಂಗಳೂರು

### ಸಂಖ್ಯೆ: ಕಾನಿಇಂ/ ಸಕಾನಿಇಂ/ ಬೃಕಾಉವಿ/ ಉಡುಪಿ/ ಸಕಾನಿಇಂ(ಕ)/ 4041-45, ದಿನಾಂಕ:13ನೇ ಅಕ್ಟೋಬರ್, 2006

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, 1948ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಸೆಕ್ಷನ್ 28(1)ರ ಅನ್ವಯ ಈ ಕೆಳಕಂಡ ಯೋಜನೆಯನ್ನು ರೂಪಿಸಿರುತ್ತದೆ ಮತ್ತು ಅದನ್ನು ಮೇಲೆ ತಿಳಿಸಿರುವ ಕಾಯ್ದೆಯ ಸೆಕ್ಷನ್ 28(3)ರ ಅನ್ವಯ ಸಂಬಂಧಪಟ್ಟ ವ್ಯಕ್ತಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

**1) ಯೋಜನೆಯ ಹೆಸರು:** ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನಲ್ಲಿರುವ 110/33/11 ಕೆ.ವಿ. ಕುಂದಾಪುರ ವಿದ್ಯುತ್ ವಿತರಣಾ ಕೇಂದ್ರದಿಂದ ಪ್ರಸ್ತಾವಿತ 110/33/11 ಕೆ.ವಿ. ನಾವುಂದ ವಿದ್ಯುತ್ ಉಪಕೇಂದ್ರದವರೆಗೆ 110 ಕೆ.ವಿ. ದ್ವಿ ಪ್ರಸರಣ ಗೋಪುರದಲ್ಲಿ ಏಕ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**2) ಪ್ರಮುಖ ಲಕ್ಷಣಗಳು:** ಸಾಂಪ್ರದಾಯಿಕವಾದ ಜಿ.ಐ. ಲ್ಯಾಟೀಸ್ ಮಾದರಿಯ ಗೋಪುರಗಳ ಮೇಲೆ ಲಿಂಕ್ಸ್ ಎ.ಸಿ.ಎಸ್.ಆರ್. ವಾಹಕವನ್ನು ಉಪಯೋಗಿಸಿ, ಸುಮಾರು 25 ಕಿ.ಮೀ. ಉದ್ದದ ಪ್ರಸ್ತಾವಿತ ಜೋಡಿ ವಿದ್ಯುತ್ ಪ್ರಸರಣಾ ಮಾರ್ಗದ ನಿರ್ಮಾಣ.

**3) ಹಾದು ಹೋಗುವ ಪ್ರದೇಶಗಳು:** ನಾವುಂದ, ಬೈಂದೂರು ಪ್ರದೇಶಗಳಿಗೆ ಉತ್ತಮ ಗುಣಮಟ್ಟದ ಹಾಗೂ ನಿರಂತರ ವಿದ್ಯುತ್ ಸರಬರಾಜು ಮತ್ತು ಸುತ್ತಮುತ್ತಲಿನಲ್ಲಿ ಬೆಳೆಯುತ್ತಿರುವ ವಿದ್ಯುತ್ ಬೇಡಿಕೆಯನ್ನು ಪೂರೈಸುವ ಸಲುವಾಗಿ ಕೈಗೊಳ್ಳಲಾದ ಈ ಪ್ರಸ್ತಾವಿತ ವಿದ್ಯುತ್ ಮಾರ್ಗವು 22 ಮೀಟರ್ ಕಾರಿಡಾರ್ ಅಗಲವನ್ನು ಹೊಂದಿದ್ದು ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಈ ಕೆಳಕಂಡ ಪ್ರದೇಶಗಳಲ್ಲಿ ಹಾದು ಹೋಗುತ್ತದೆ. ಕುಂದಾಪುರ, ಕೋಣಿ, ಆನಗಳಿ, ಸಬ್ಲಾಡಿ, ಕನ್ಯಾನ, ಹೆಮ್ಮಾಡಿ, ಕಟ್ಟಿಬೆಲ್ತೂರು, ತೊಪ್ಲಲು, ಏಳೂರು, ಹಕ್ಲಾಡಿ, ಸೇನಾಪುರ, ನಾಡ, ಕಡ್ಕೆ, ಬಡಾಕೆರೆ, ಅರೆಹೊಳೆ, ನಾವುಂದ.

**4) ಪ್ರಸರಣ ಮಾರ್ಗದ ಮತ್ತು ವಿದ್ಯುತ್ ಕೇಂದ್ರದ ಅಂದಾಜು ಮೌಲ್ಯ:** ಸಾಮಗ್ರಿ ಮತ್ತು ಲೇಬರ್ ವೆಚ್ಚ ಸೇರಿಸಿ ಅಂದಾಜು 1540.26 ಲಕ್ಷ ರೂಪಾಯಿಗಳು.

ಮೇಲೆ ತಿಳಿಸಿರುವ ಯೋಜನೆಯನ್ನು ಕಾರ್ಯಗತಗೊಳಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಭಾರತೀಯ ಟೆಲಿಗ್ರಾಫಿಕ್ ಕಾಯ್ದೆ 1985 (1885ರ 18) ಅಧಿನಿಯಮ ಭಾಗ-III ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಮೇಲಿನ ಪ್ರಸ್ತಾವಿತ ಯೋಜನೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ ಎರಡು ತಿಂಗಳೊಳಗಾಗಿ ಈ ಕೆಳಗಿನ ಕಛೇರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರ (ವಿದ್ಯುತ್),
ಪಿ.ಡಿ.17 ಬೃಹತ್ ಕಾಮಗಾರಿ ವಿಭಾಗ, (ಉಡುಪಿ),
ಕ.ವಿ.ಪ್ರ.ನಿ.ನಿ. ಕಾವೂರು, ಮಂಗಳೂರು.

**KARNATAKA POWER TRANSMISSION CORPORATION LIMITED**

**Office of the Executive Engineer, Elecl., Mandya Major Works Division, KPTCL, N.R. Mohalla, Mysore-7**

**NOTIFICATION**

**No. EEE/ MWD/ MDY/ 2006-07/ 4833-37, Dated:15th November, 2006**

Karnataka Power Transmission Corporation Limited has formulated a scheme under section 28 and clause (e) of section 18 of the Electricity supply Act 1948 and the scheme is herewith published in pursuance of section 29(2) of the said Act, this notification is issued for information of the license holders and any other concerned persons. Particulars of the scheme are as hereunder:

**Name of the Work:** Construction of Proposed 66KV tap line tapping from the Existing 66KV Tubinakere- Arakere line to the proposed 66/11KV S/S at Gamanahally in Srirangapatna Taluk, Mandya District.

**Salient Features and:** To Improve Voltage condition & To meet future Loads of Gamanahally & its Surrounding areas.

**Areas Passing through:** Karakehalli, Bettahalli, NerelekereKalkere & Gamanahally Limits.

**Approximate length of the line:** 7.83 Km.

**Approximate Cost:** 140 Lakhs.

KPTCL shall have and exercise all powers which the telegraph authorities possess under part-III of the Indian Telegraph Act, 1985 (13 of 1985) for implementation of the above said scheme. Any objections regarding the above scheme shall be sent to the Executive Engineer Elecl., Mandya Major works Division, KPTCL, Mysore-7 within two months from the date of Publication of this notification for KPTCL's pursuance.

Executive Engineer Elecl.,
PD-18 M.W. Division, KPTCL, Mandya.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಪ್ರಕಟಣೆ**

**ಸಂಖ್ಯೆ: ಕಾನಿಅ(ವಿ)/ ಬೃಕಾವಿ/ ಬ/ ಸಕಾನಿಅ(ಕ)/ 06-07/ 2591-93, ದಿನಾಂಕ:22ನೇ ನವೆಂಬರ್, 2006**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28 ಮತ್ತು 18ಇ) ಅನುಸಾರವಾಗಿ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಕೆಳಗಿನ ಯೋಜನೆಗಳನ್ನು ರೂಪಿಸಿದೆ. ಈ ಯೋಜನೆಗಳು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

**1) ಕೆಲಸದ ಹೆಸರು:** ಬಣವಿಕಲ್ಲು: ಕೂಡ್ಲಿಗಿ - ಬಣವಿಕಲ್ಲು 66 ಕೆವಿ ವಿದ್ಯುತ್ ಪ್ರಸರಣ ಮಾರ್ಗ (18 ಕಿ.ಮಿ.) ಉದ್ದೇಶ: ಬಣವಿಕಲ್ಲು ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ, ಹಾದು ಹೋಗು ಪ್ರದೇಶ: ಕೂಡ್ಲಿಗಿ, ಮರಬದಹಳ್ಳಿ, ಮರಬ, ಮಲ್ಲಾಪುರ, ಅಮಲಾಪುರ, ಬಣವಿಕಲ್ಲು.

**2) ಕೆಲಸದ ಹೆಸರು:** ಮೋರಿಗೆರೆ: 66 ಕೆವಿ ಪ್ರಸರಣ ಮಾರ್ಗ (0.5 ಕಿ.ಮಿ.): **ಉದ್ದೇಶ:** ಮೋರಿಗೆರೆ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ **ಹಾದು ಹೋಗುವ ಪ್ರದೇಶ:** ಮೋರಿಗೆರೆ ಗ್ರಾಮದ ಸರಹದ್ದುಗಳಲ್ಲಿ.

ಮೇಲಿನ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985ರ (1985ರ 13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ., ಹೊಂದಿರುವುದು ಮತ್ತು ಅಧಿಕಾರವನ್ನು ಕವಿಪ್ರನಿನಿ., ಚಲಾಯಿಸುವುದು. ಈ ಯೋಜನೆಗಳ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಳ್ಳಾರಿ ಇವರಿಗೆ ಲಿಖಿತ ರೂಪದಲ್ಲಿ ಸಲ್ಲಿಸಬೇಕಾಗಿ ವಿನಂತಿ ಹಾಗೂ ತದನಂತರ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಎಂದು ಈ ಮೂಲಕ ತಿಳಿಯಪಡಿಸುತ್ತಿದ್ದೇವೆ.

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಪಿ.ಡಿ.19 ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಳ್ಳಾರಿ.

## STENOGRAPHERS AND TYPISTS SELECTION AUTHORITY

**Vishveshwaraiah Kendra, Main Tower, 20th Floor, Dr. Ambedkar Veedhi, Bangalore-560 001**

### NOTIFICATION

**No. Sheebepra 27 Ithare 2006, Bangalore, Dated:13th November, 2006**

In accordance with clause (1) of sub-section (b) (XVII) of section 4 of The Right to Information Act, 2005 (Central Act 22 of 2005), the detailed up-dated information relating to the Stenographers & Typists Selection Authority is published as hereunder:

4(b)(i) **The particulars of its organisation, functions and duties:**

**Officers:** Deputy Secretary to Government,
D.P.A.R. (Administration) and
Stenographers & Typists Selection Authority.
Administrative Officer, Assistant Administrative Officer.

**Employees:** Senior Assistant,
Assistant-I,
Asistant-II,
Stenographer,
Typists
Junior Assistant
Dalayath.

**Functions:** Selecting candidates for the post of Stenographers and Typists in the Departments of Karnataka Government.

**4(b)(ii) The powers and duties of its Officers and employees;**

| | |
|---|---|
| DALAYATH: | To keep the office neat and tidy. To deliver the files/ tappals to other sections/ departments as per the instructions of Secretariat Manual of Office Procedure. |
| JUNIOR ASSISTANT: | In charge of the work of Dairying, movements, distribution of receipts/ files in the Section. |
| TYPIST: | In charge of the typing work at Section. |
| CASE WORKERS (SENIOR ASSISTANT/ ASSISTANT): | To attend to the work of case working as per the duties cast on them in the Secretariat Manual. |
| P.A./ STENOGRAPHER: | In charge of receipt of tappals/ files of Administrative Officer/ Assistant Administrative Officer, Typing and Stenography work entrusted by Administrative Officer/ Assistant Administrative Officer. |
| ASSISTANT ADMINISTRATIVE OFFICER: | In charge of the whole section. Scrutiny of applications for the posts of Stenographers and Typists and files submitted by the case worker as per the procedure of Secretariat Manual. |

| | |
|---|---|
| ADMINISTRATIVE OFFICER: | In charge of the whole section. Scrutiny of applications for the posts of Stenographers and Typists and files submitted by Assistant Administrative Officer.<br>Issue of Order/ Letters/ Circulars/ Notifications, etc., on behalf of the Authority. |
| DEPUTY SECRETARY: | Head of the Organisation. Official Authority on behalf of the Stenographers and Typists Selection Authority. |

**4(b)(iii) The procedure followed in the decision making process, including channels of supervision and accountability:**

| | |
|---|---|
| CASE WORKER: | Opening of a new file on receipt of a proposal OR processing the receipt in the existing file. |
| ASSISTANT ADMINISTRATIVE OFFICER: | Will scrutinize the proposal with all relevant facts and mark the file to Administrative Officer with a course of action to be adopted. |
| ADMINISTRATIVE OFFICER: | Will suggest the suitability or otherwise of the course of action suggested, and define the same in the light of the existing provisions of Rules or Acts. |
| DEPUTY SECRETARY: | Will decide on the course of action to be taken on a proposal. |

**4(b)(iv) The norms set by it for the discharge of its functions:**

| | |
|---|---|
| DALAYATH: | Carrying out the functions entrusted to him the same day. |
| JUNIOR ASSISTANT: | Carrying out the functions entrusted to him the same day. |
| CASE WORKERS | Upto 5 days for submission of files/ tappals (as per manual) |
| ASSISTANT ADMINISTRATIVE OFFICER | To attend to the work on priority and immediate basis. |
| ADMINISTRATIVE OFFICER: | To attend to the work on priority and immediate basis. |
| DEPUTY SECRETARY TO GOVERNMENT D.P.A.R. (ADMINISTRATION) & STENOGRAPHERS & TYPISTS SELECTION AUTHORITY. | To attend to the work on priority and immediate basis. |

**4 (b)(V) The Rules, regulations, instructions, manuals and records, held by it or under its control or used by its employees for discharging its functions;**

| | |
|---|---|
| (a) RULES | 1) Karnataka State Civil Services (General Recruitment) Rules, 1977.<br>2) Karnataka Civil Services (Recruitment to the post of Stenographers & Typists) Rules, 1983. |
| (b) INSTRUCTIONS MANUALS & OTHERS: | 1) The Karnataka Government Secretariat Manual of Office Procedure. |

**4(b) (vi)** A statement of the categories of documents that are held by it or under its control;

1) Register of Common Merit List of candidates for the posts of Stenographers and Typists.
2) Selection List of selected candidates for the posts of Stenographers and Typists.

**4(b) (vii)** The particulars of any arrangement that exists for consultation with, or representation by the members of the public in relation to the formulation of its policy or implementation thereof;

-NIL-

**4 (b)(viii)** A statement of the boards, councils, committees and other bodies consisting of two or more persons constituted as its part or for the purpose of its advice, and as to whether meetings of those boards councils, committees and other bodies are open to the public, or the minutes of such meetings are accessible for public;

No Boards, Councils, Committees and other Bodies and constituted.

**4(b) (ix) A directory of its officers and employees:**

| Sl. No. | Post | Name | Telephone No. |
|---|---|---|---|
| 1. | Dy. Secretary to Government D.P.A.R. (Administration) & Stenographers & Typists Selection Authority. | M.S. Swamy | 22256808 |
| 2. | Administrative Officer | K. Narayana | 22862022 |
| 3. | Asst. Administrative Officer | P.K. Badigannavar | 22862022 |
| 4. | Senior Assistant | (Vacant) | |
| 5. | Assistant-I | A. Krishnappa | |
| 6. | Assistant-II | John Prakash Rodrigues | |
| 7. | Stenographer | (Vacant) | |
| 8. | Senior Typist | K.N. Meenakshi | |
| 9. | Junior Assistant | (Vacant) | |
| 10. | Jamedar | B.C. Bhagyalakshmi | |

**4(b) (x) The monthly remuneration received by each of its officers and employees, including the system of compensation as provided in its regulations:**

| Sl. No. | Post | Name | Gross Salary |
|---|---|---|---|
| 1. | Dy. Secretary to Government D.P.A.R. (Administration) and Stenographers & Typists Selection Authority. | M.S. Swamy | Rs.25,534/- |
| 2. | Administrative Officer | K. Narayana | Rs.18,501/- |
| 3. | Asst. Administrative Officer | P.K. Badigannavar | Rs.17,536/- |
| 4. | Assistant-I | A. Krishnappa | Rs.9,927/- |
| 5. | Assistant-II | John Prakash Rodrigues | Rs.8,942/- |
| 6. | Typist | K.N. Meenakshi | Rs.8,713/- |
| 9. | Jamedar | B.C. Bhagyalakshmi | Rs.7,820/- |

**4 (b)(xi)** The budget allocated to each of its agency, indicating the particulars of all plans, proposed expenditure and reports on disbursements made;

No separate budget allocation has been made in respect of this Authority.

**4 (b) (xii)** The manner of execution of subsidy programmes, including the amounts allocated and the details of beneficiaris of such programmes;

No subsidy programmes are implemented by the Authority.

**4 (b) (xiii)** Particulars of recipients of concessions, permits or authorisation granted by it;

No concession, permits or authorisation are granted by the Authority.

**4 (b) (xiv)** Details in respect of information, available to or held by it, reduced in an electronic form;

-NIL-

**4 (b) (xv)** The particulars of facilities available to citizens for obtaining information, including the working hours of a library or reading room, if maintained for public use;
No library or reading room is maintained by the Authority. Notification calling for applications and select lists are displayed on the notice board.

**4(b) (xvi)** The names, designations and other particulars of the Public Information Officers;
Sri K. Narayana, Administrative Officer, Stenographers & Typists Selection Authority, V.V. Main Tower, 20th Floor, Dr. Ambedkar Veedhi, Bangalore-560 001.
Phone No. 22862022.

By Order and in the name of the Governor of Karnataka,
**K. NARAYANA**
PR-59
Administrative Officer,
Stenographers & Typists Selection Authority.

## ಶಿಕ್ಷಣ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಇಡಿ 210 ಡಿಸಿಇ 2004, ಬೆಂಗಳೂರು, ದಿನಾಂಕ:8ನೇ ಜನವರಿ, 2007

ಕಾಲೇಜು ಶಿಕ್ಷಣ ಇಲಾಖೆಯಲ್ಲಿನ ಶ್ರೀ ಚೇತನ್‌ಕುಮಾರ್, ಅರೆಕಾಲಿಕ ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿರಗುಪ್ಪ ಹಾಗೂ ಶ್ರೀ ಶಿವಣ್ಣ ಪಿ. ಅರೆಕಾಲಿಕ ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು ಹಾಗೂ ಶ್ರೀ ಗೋಪಾಲಕೃಷ್ಣ ಕೆ. ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಪು ಇವರುಗಳ ಸೇವೆಯನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ) ಕಾಲೇಜು ಶಿಕ್ಷಣ ಇಲಾಖೆ (ವಿಶೇಷ) ನಿಯಮಗಳು 1996ಕ್ಕೆ ಹೊರಡಿಸುವ ತಿದ್ದುಪಡಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ಮತ್ತು ಈ ಕೆಳಕಂಡ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿನ ಉಪನ್ಯಾಸಕರ ಹುದ್ದೆಯಲ್ಲಿ ಯು.ಜಿ.ಸಿ. ಶ್ರೇಣಿ ರೂ.8,000-275-13500ನಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಮೀಸಲಾತಿ ವರ್ಗ | ಅರೆಕಾಲಿಕ ಉಪನ್ಯಾಸಕರ ಹೆಸರು ಮತ್ತು ಈಗ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಜನ್ಮ ದಿನಾಂಕ | ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ |
|---|---|---|---|---|
| 1. | ಪ.ಜಾತಿ | ಶ್ರೀ ಚೇತನ್‌ಕುಮಾರ್, ಅರೆಕಾಲಿಕ ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿರಗುಪ್ಪ. | 01.07.1956 | - |
| 2. | ಪ.ಜಾತಿ | ಶ್ರೀ ಶಿವಣ್ಣ ಪಿ. ಅರೆಕಾಲಿಕ ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು. | 24.07.1969 | - |
| 3. | 3ಎ | ಗೋಪಾಲಕೃಷ್ಣ ಕೆ. ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಪು. | 01.03.1969 | - |

1. ಇವರುಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತುಗಳ ನಿಯಮ/ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
2. ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.
3. ಇವರು ಪರಿವೀಕ್ಷಣಾ ಅವಧಿಯಲ್ಲಿ 1974ರ ಕ.ನಾ.ಸೇ. (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಗಳಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಹಾಗೆಯೇ ಇವರು "ಒಂದು ತಿಂಗಳ ಓರಿಯೆಂಟೇಷನ್ ಕೋರ್ಸ್" ತರಬೇತಿಯನ್ನು ಕಡ್ಡಾಯವಾಗಿ ಪೂರ್ಣಗೊಳಿಸತಕ್ಕದ್ದು.
4. ಇವರ ಸೇವಾ ಜೇಷ್ಠತೆ ಮೀಸಲಾತಿ ಮತ್ತು ಅರೆಕಾಲಿಕ ಉಪನ್ಯಾಸಕರುಗಳ ಇಂಟರ್ ಸೇವಾ ಜೇಷ್ಠತಾ ಪಟ್ಟಿಯನ್ನು ಸಿದ್ಧಪಡಿಸಿ ಪರಿಷ್ಕರಿಸುವ ಬದಲಾವಣೆಗೆ ಒಳಪಟ್ಟಿರುತ್ತದೆ.
5. ಇವರುಗಳ ನೇಮಕಾತಿಯು ಅರೆಕಾಲಿಕ ಉಪನ್ಯಾಸಕರುಗಳ ಸೇವಾ ವಿಲೀನತೆ ಬಗ್ಗೆ ಉದ್ಭವಿಸಲಿರುವ ನ್ಯಾಯಾಲಯದ ತಕರಾರುಗಳಲ್ಲಿ ನ್ಯಾಯಾಲಯಗಳು ನೀಡಲಿರುವ ತೀರ್ಪಿಗೆ ಒಳಪಟ್ಟಿರುತ್ತದೆ.
6. ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ: ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.
7. ಈ ಅರೆಕಾಲಿಕ ಉಪನ್ಯಾಸಕರು ತಮ್ಮ ಜಾತಿ ದೃಢೀಕರಣದ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ವರದಿ ಸಲ್ಲಿಸುವಾಗ ಹಾಜರುಪಡಿಸತಕ್ಕದ್ದು.

ಈ ಉಪನ್ಯಾಸಕರಿಗೆ ಸ್ಥಳ ನಿಯುಕ್ತಿ ಆದೇಶವನ್ನು ಕಾಲೇಜು ಶಿಕ್ಷಣ ಆಯುಕ್ತರು 15 ದಿನಗಳೊಳಗೆ ಹೊರಡಿಸುವರು. ಈ ಅರೆಕಾಲಿಕ ಉಪನ್ಯಾಸಕರು ಕಾಲೇಜು ಶಿಕ್ಷಣ ಆಯುಕ್ತರು ಹೊರಡಿಸಿದ ಪೋಸ್ಟಿಂಗ್ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಪೋಸ್ಟಿಂಗ್ ಮಾಡಲ್ಪಟ್ಟ ಕಾಲೇಜಿನಲ್ಲಿ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.60
**ಸಿ. ಬಸವರಾಜು**
ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

## ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಅಬ್ದುಲ್ ಸತ್ತಾರ್, ಟ್ಯಾಕ್ಸ್ಇನ್ಸ್‌ಪೆಕ್ಟರ್, ಆಫೀಸ್ ಆಫ್ ದಿ ಅಸಿಸ್ಟೆಂಟ್ ರೆವಿನ್ಯೂ ಆಫೀಸರ್, ಗಾಂಧಿನಗರ ರೇಂಜ್, ಡಾ.ಟಿ.ಸಿ.ಎಂ. ರಾಯನ್ ರೋಡ್, ಬಿ.ಎಂ.ಪಿ. ಬೆಂಗಳೂರು ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀ ಅಬ್ದುಲ್ ಸತ್ತಾರ್, ನೋಂದಣಿ ಸಂಖ್ಯೆ 60007 ಇವರ ಅರ್ಜಿ ದಿನಾಂಕ 21-09-2005.
2. ಶ್ರೀ ಅಬ್ದುಲ್ ಸತ್ತಾರ್ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಅಬ್ದುಲ್ ಸತ್ತಾರ್ ಇವರ ದಿನಾಂಕ 27-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಉತ್ತರ ಪತ್ರಿಕೆ-2ರ ಮೌಲ್ಯಮಾಪನದ ಕಾರ್ಯವನ್ನು ಕೈಗೊಂಡಾಗ ಇವರ ಉತ್ತರ ಪತ್ರಿಕೆಯಲ್ಲಿ ಹಸ್ತಾಕ್ಷರ ವಿಭಿನ್ನ ರೀತಿಯಲ್ಲಿದ್ದು, ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯ ಈ ರೀತಿ ಮಾಡಿ ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ(2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಿರುವ ಕಾರಣ 27-04-2006 ಮಧ್ಯಾಹ್ನ 2.30 ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ: 27-04-2006ರಂದು ಹಾಜರಾದ ಸಮಯದಲ್ಲಿ ಅಭ್ಯರ್ಥಿಯು ಈ ಮುಂದಿನಂತೆ ಹೇಳಿಕೆ ನೀಡಿರುತ್ತಾರೆ. ನನಗೆ ಕನ್ನಡಭಾಷಾ ಪತ್ರಿಕೆ-2ರ ನೋಂದಣಿ ಸಂಖ್ಯೆ 60007 ಮತ್ತು 60008ರ ಎರಡು ಉತ್ತರ ಪತ್ರಿಕೆಗಳನ್ನು ತೋರಿಸಿ ಇದರಲ್ಲಿನ ಬರವಣಿಗೆಗಳು ಒಂದೇ ರೀತಿ ಇದೆ ಎಂದು ಪ್ರಶ್ನಿಸಿದ್ದು ಉತ್ತರ ಪತ್ರಿಕೆಗಳಲ್ಲಿ ಬರೆದಿದ್ದ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ಬರೆಸಿದ್ದು, ಬರೆದ ಬರವಣಿಗೆಯ ಎರಡು ಉತ್ತರಪತ್ರಿಕೆ ಒಂದೇ ಆಗಿದ್ದು, ಅದು ಹೇಗೆ ಎಂದು ಕೇಳಲಾಗಿ, ಶ್ರೀ ಅಬ್ದುಲ್ ಶುಕೂರ್ ನೋಂದಣಿ ಸಂಖ್ಯೆ 60008 ರವರು, ಅವರ ವಾರ್ಷಿಕ ವೇತನ ಬಡ್ತಿ ತಡೆಹಿಡಿದಿರುವುದರಿಂದ ಸಹಾಯ ಮಾಡಿ ಎಂದು ಕೇಳಿಕೊಂಡಿದ್ದರು, ಅದಕ್ಕೆ ಅವರಿಗೆ ಸಹಾಯ ಮಾಡುವ ಉದ್ದೇಶದಿಂದ ನಾನೇ ಬರೆದು ಕೊಟ್ಟಿರುವುದಾಗಿ ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀ ಅಬ್ದುಲ್ ಸತ್ತಾರ್ ರವರು ದಿನಾಂಕ 27-04-2006ರಂದು ಅವರು ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರ ಎಸಗಿರುವುದಾಗಿ ತಪ್ಪೊಪ್ಪಿಕೊಂಡಿದ್ದು ಅವರ ಮೇಲಿನ ಆರೋಪವು ಸಾಬೀತಾಗಿದ್ದು ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಮುಂದಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ, ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಅಬ್ದುಲ್ ಸತ್ತಾರ್, ಟ್ಯಾಕ್ಸ್ ಇನ್ಸ್‌ಪೆಕ್ಟರ್, ಆಫೀಸ್ ಆಫ್ ದಿ ಅಸಿಸ್ಟೆಂಟ್ ರೆವಿನ್ಯೂ ಆಫೀಸರ್, ಗಾಂಧಿನಗರರೇಂಜ್, ಡಾ.ಟಿ.ಸಿ.ಎಂ. ರಾಯನ್ ರೋಡ್, ಬಿ.ಎಂ.ಪಿ., ಬೆಂಗಳೂರು ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಪಿ.ಬ್ರಹ್ಮಯ್ಯ, ಕುಕ್ ಅಸಿಸ್ಟೆಂಟ್, ಬಿಸಿಎಂ ಕಾಲೇಜು ಹಾಸ್ಟೆಲ್, ರೇಡಿಯೋ ಪಾರ್ಕ್, ಬಳ್ಳಾರಿ ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀ ಪಿ.ಬ್ರಹ್ಮಯ್ಯ ನೋಂದಣಿ ಸಮಖ್ಯೆ 67210 ಇವರ ಅರ್ಜಿ ದಿನಾಂಕ 19-09-2005.
2. ಶ್ರೀ ಪಿ.ಬಹ್ಮಯ್ಯ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಪಿ ಬ್ರಹ್ಮಯ್ಯ ಇವರ ದಿನಾಂಕ 27-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಾದ ಕನ್ನಡಭಾಷಾ ಪರೀಕ್ಷೆ ಉತ್ತರ ಪತ್ರಿಕೆ-2ರ ಮೌಲ್ಯಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ಪಿ.ಬ್ರಹ್ಮಯ್ಯ, ಕುಕ್ ಅಸಿಸ್ಟೆಂಟ್, ಬಿಸಿಎ ಕಾಲೇಜು ಹಾಸ್ಟೆಲ್, ರೇಡಿಯೋ ಪಾರ್ಕ್, ಬಳ್ಳಾರಿ ಇವರ ಉತ್ತರ ಪತ್ರಿಕೆಯಲ್ಲಿ ಬರವಣಿಗೆಗಳು ವಿಭಿನ್ನವಾಗಿದ್ದು ಮತ್ತೊಬ್ಬರಿಂದ ಉತ್ತರ ಬರೆಸಿರಬಹುದು ಎಂಬ ಸಂಶಯವು ಆಯೋಗದ ಗಮನಕ್ಕೆ ಬಂದಿದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿ ಪಡೆಯಬೇಕಿರುವ ಕಾರಣ ದಿನಾಂಕ:27-04-2006ರ ಮಧ್ಯಾಹ್ನ 2.30 ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ 27-04-2006ರಲ್ಲಿ ಹಾಜರಾದ ಸಮಯದಲ್ಲಿ ಅಭ್ಯರ್ಥಿಯು ಈ ಮುಂದಿನಂತೆ ಹೇಳಿಕೆ ನೀಡಿರುತ್ತಾರೆ. ನನಗೆ ಕನ್ನಡಭಾಷಾ ಪತ್ರಿಕೆ-2ರ ನೋಂದಣಿ ಸಂಖ್ಯೆ 67210 ಮತ್ತು 67346ರ ಎರಡು ಉತ್ತರ ಪತ್ರಕೆಗಳನ್ನು ತೋರಿಸಿ ಇದರಲ್ಲಿನ ಬರವಣಿಗೆಗಳು ಒಂದೇ ರೀತಿ ಇದೆ ಎಂದು ಪ್ರಶ್ನಿಸಿದ್ದು, ಉತ್ತರ ಪತ್ರಿಕೆಗಳಲ್ಲಿ ಬರೆದಿದ್ದ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ಬರೆಸಿದ್ದು, ಬರೆದ ಬರವಣಿಗೆಯ ಎರಡು ಉತ್ತರಪತ್ರಿಕೆ ಒಂದೇ ಆಗಿದ್ದು, ಅದು ಹೇಗೆ? ಎಂದು ಕೇಳಾಲಾಗಿ ಶ್ರೀ ಮಧುಸೂದನ ನೋಂದಣಿ ಸಂಖ್ಯೆ 67346 ರವರು ಅವರ ವಾರ್ಷಿಕ ಬಡ್ತಿ ತಡೆಹಿಡಿದಿರುವುದರಿಂದ ಸಹಾಯ ಮಾಡಿ ಎಂದು ಬಹಳವಾಗಿ ಕೇಳಿಕೊಂಡಿದ್ದರು. ಅದಕ್ಕೆ ಅವರಿಗೆ ಸಹಾಯ ಮಾಡುವ ಉದ್ದೇಶದಿಂದ ನಾನೇ ಬರೆದುಕೊಟ್ಟಿರುವುದಾಗಿ ತಪ್ಪೊಪ್ಪಿಕೊಂಡಿದ್ದಾರೆ.

ಶ್ರೀ ಬ್ರಹ್ಮಯ್ಯ ರವರು ದಿನಾಂಕ: 27-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಚಾರವೆಸಗಿರುವುದಾಗಿ ತಪ್ಪೊಪಿಕೊಂಡಿದ್ದು ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ)) ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಮುಂದಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಪಿ.ಬ್ರಹ್ಮಯ್ಯ, ಕುಕ್ ಅಸಿಸ್ಟೆಂಟ್, ಬಿಸಿಎಂ ಕಾಲೇಜು ಹಾಸ್ಟೆಲ್, ರೇಡಿಯೋ ಪಾರ್ಕ್, ಬಳ್ಳಾರಿ ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಜಾವೇದ್ ಮಿರ್ಜಾ, ನೋಂದಣಿ ಸಂಖ್ಯೆ 60463 ಪೊಲೀಸ್ ಪೇದೆ, ನಂ-330 'ಎಫ್' ಕಂಪನಿ ಸಿಎಆರ್ ಸೌತ್, ಆಡುಗೋಡಿ, ಬೆಂಗಳೂರು ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀ ಜಾವೇದ್ ಮಿರ್ಜಾ ನೋಂದಣಿ ಸಂಖ್ಯೆ 60463 ಇವರ ಅರ್ಜಿ ದಿನಾಂಕ 22-09-2005.
2. ಶ್ರೀ ಜಾವೇದ್ ಮಿರ್ಜಾ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ, ದಿನಾಂಕ: 15-04-2006.
3. ಶ್ರೀ ಜಾವೇದ್ ಮಿರ್ಜಾ, ಇವರ ದಿನಾಂಕ 27-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-1 ಮತ್ತು 2ರ ಉತ್ತರಪತ್ರಿಕೆಯ ಮೌಲ್ಯಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ಜಾವೇದ್ ಮಿರ್ಜಾ, ನೋಂದಣಿ ಸಂಖ್ಯೆ 60463 ಪೊಲೀಸ್ ಪೇದೆ, ನಂ-330 'ಎಫ್' ಕಂಪನಿ ಸಿಎಆರ್ ಸೌತ್, ಆಡುಗೋಡಿ, ಬೆಂಗಳೂರು ಇವರ ಉತ್ತರ ಪತ್ರಿಕೆಯಲ್ಲಿ ಬರವಣಿಗೆ ಒಂದಕ್ಕೊಂದು ತಾಳೆಯಾಗಿರುವುದಿಲ್ಲವೆಂದು ಕಂಡುಬಂದು, ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ, ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿ ಪಡೆಯಬೇಕಿರುವ ಕಾರಣ ದಿನಾಂಕ 27-04-2006ರ ಮಧ್ಯಾಹ್ನ 2.30 ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ 27-04-2006 ರಂದು ಹಾಜರಾದ ಸಮಯದಲ್ಲಿ ಪತ್ರಿಕೆ-2ರಲ್ಲಿ ನೋಂದಣಿ ಸಂಖ್ಯೆ 60463 ಮತ್ತು 60064ರ ಉತ್ತರಪತ್ರಿಕೆಗಳನ್ನು ತೋರಿಸಿ ಇದರಲ್ಲಿನ ಬರೆದ ಬರವಣಿಗೆ ತಾಳೆಯಾಗುತ್ತಿಲ್ಲವೆಂದು

ಎಂದು ಪ್ರಶ್ನಿಸಿದ್ದು ಅಭ್ಯರ್ಥಿಯು ಈ ಮುಂದಿನಂತೆ ಹೇಳಿಕೆ ನೀಡಿರುತ್ತಾರೆ. ನನಗೆ ಕನ್ನಡಭಾಷಾ ಪರೀಕ್ಷಾ ಸಮಯ ಸಾಲದಿದ್ದರಿಂದ ಪರೀಕ್ಷಾ ಅವಧಿ ಮುಗಿಯುತ್ತಿದ್ದು, 10 ನಿಮಿಷಗಳು ಮಾತ್ರ ಉಳಿದಿರುವಾಗ ನಾನು ಕುಳಿತಿದ್ದ ಪಕ್ಕದ ಅಭ್ಯರ್ಥಿಯಾದ ಶ್ರೀ ಅರೀಫ್ ಅಹಮದ್ ಷರೀಫ್ (ನೋಂದಣಿ ಸಂಖ್ಯೆ 60064)ರವರ ಕೈಗೆ ಉತ್ತರ ಪತ್ರಿಕೆಯನ್ನು ಕೊಟ್ಟು ಬರೆಯಿಸಿಕೊಂಡೆ ಎಂದು ಇದನ್ನು ಕೊಠಡಿ ಸಂವೀಕ್ಷಕರು ಗಮನಿಸಲಿಲ್ಲವೇ ಎಂದು, ಪ್ರಶ್ನಿಸಿದಾಗ, ಅವರು ಬೇರೆಯವರ ಉತ್ತರಪತ್ರಿಕೆಗಳನ್ನು ಪಡೆಯುವ ತರಾತುರಿಯಲ್ಲಿದ್ದರೆಂದು ವಾರ್ಷಿಕ ಮುಂಬಡ್ತಿ ಪಡೆಯುವ ಒಂದೇ ಕಾರಣಕ್ಕಾಗಿ ತಪ್ಪು ಮಾಡಿರುತ್ತೇನೆ ಎಂದು ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀ ಜಾವೇದ್ ಮಿರ್ಜಾ ರವರು ದಿನಾಂಕ 27-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರ ಎಸಗಿರುವುದಾಗಿ ತಪ್ಪೊಪ್ಪಿಕೊಂಡಿದ್ದರಿಂದ, ಅವರ ಮೇಲಿನ ಅರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ, ದಿನಾಂಕ:14-09-1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಜಾವೇದ್ ಮಿರ್ಜಾ, ನೋಂದಣಿ ಸಂಖ್ಯೆ 60463, ಪೊಲೀಸ್ ಪೇದೆ, ನಂ-330 'ಎಫ್' ಕಂಪನಿ ಸಿಎಆರ್ ಸೌತ್, ಆಡುಗೋಡಿ, ಬೆಂಗಳೂರು ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀಮತಿ ಶಮೀಮುನಿಸಾ ಬೇಗಂ, (ನೋಂದಣಿ ಸಂಖ್ಯೆ 74131) ಟೀಚರ್, ಸರಕಾರಿ ಉರ್ದು ಬಾಯ್ಸ್ ಪ್ರೈಮರಿ ಸ್ಕೂಲ್, ನಂ.8, ಕೇಶವಪುರ, ಹುಬ್ಬಳ್ಳಿ ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿನ ಶ್ರೀಮತಿ ಶಮೀಮುನಿಸಾ ಬೇಗಂ ನೋಂದಣಿ ಸಂಖ್ಯೆ 74131 ಇವರ ಅರ್ಜಿ ದಿನಾಂಕ 22-09-2005.
2. ಶ್ರೀಮತಿ ಶ್ರೀಮತಿ ಶಮೀಮುನಿಸಾ ಬೇಗಂ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2005.
3. ಶ್ರೀಮತಿ ಶಮೀಮುನಿಸಾ ಬೇಗಂ ಇವರ ದಿನಾಂಕ 27-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಉತ್ತರ ಪತ್ರಿಕೆಯ ಪತ್ರಿಕೆ-2 ರ ಮೌಲ್ಯ ಮಾಪನದ ಕಾರ್ಯವನ್ನು ಆಯೋಗವು ಕೈಗೊಂಡಾಗ ಶ್ರೀಮತಿ ಶಮೀಮುನಿಸಾ ಬೇಗಂ, ನೋಂದಣಿ ಸಂಖ್ಯೆ 74131 ಟೀಚರ್, ಸರಕಾರಿ ಉರ್ದುಬಾಯ್ಸ್ ಪ್ರೈಮರಿ ಸ್ಕೂಲ್, ನಂ.8, ಕೇಶವಪುರ, ಹುಬ್ಬಳ್ಳಿ ಇವರ ಉತ್ತರಪತ್ರಿಕೆಯಲ್ಲಿ ಹಸ್ತಾಕ್ಷರಗಳು ತಾಳೆಯಾಗುತ್ತಿಲದೆ ಬೇರೆಯವರಿಂದ ಉತ್ತರಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಿರುವ ಕಾರಣ ದಿನಾಂಕ 27-04-2006ರಂದು ಬೆಳಗ್ಗೆ 10.30ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ 27-04-2006ರಂದು ಹಾಜರಾದ ಸಮಯದಲಿ ಅಭ್ಯರ್ಥಿಯು ಈ ಮುಂದಿನಂತೆ ಹೇಳಿಕೆ ನೀಡಿರುತ್ತಾರೆ. ನನಗೆ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-2ರ ನೋಂದಣಿ ಸಂಖ್ಯೆ 74131 ಮತ್ತು 74135ರ ಎರಡು ಉತ್ತರಪತ್ರಿಕೆಗಳನ್ನು ತೋರಿಸಿ ಇದರಲ್ಲಿನ ಬರವಣಿಗೆಗಳು ಒಂದೇ ರೀತಿ ಇದೆ ಎಂದು ಪ್ರಶ್ನಿಸಿದ್ದು, ಉತ್ತರಪತ್ರಿಕೆಯಲ್ಲಿ ಬರೆದಿದ್ದ ಕನ್ನಡ ಮತ್ತು ಇಂಗ್ಲೀಷ್ ಎರಡು ಭಾಷೆಯ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ನೀಡುವ ಮೂಲಕ ಬರೆಸಿದ್ದು ಬರೆದ ಬರವಣಿಗೆ ಒಂದೇ ರೀತಿ ಆಗಿದೆ, ನಾನು ಇಲಾಖೆಯಲ್ಲಿ 12ವರ್ಷ ಸೇವೆ ಸಲ್ಲಿಸಿದ್ದು ವಾರ್ಷಿಕ ಬಡ್ತಿ ಪಡೆಯಲು ಒಂದೇ ಒಂದು ಉದ್ದೇಶದಿಂದ ನನ್ನ ಪಕ್ಕದಲ್ಲಿ ಕುಳಿತ್ತಿದ್ದ ಮಹಿಳಾ ಅಭ್ಯರ್ಥಿಯಾದ ಶ್ರೀಮತಿ ಶಾಜಾದ್ ಬಿ.ಬೆಂಡಗೇರಿ(ನೋಂದಣಿ ಸಂಖ್ಯೆ 74135) ರವರಿಂದ ನಾನು ಅವರನ್ನು ತುಂಬಾ ಸಲ ವಿನಂತಿಸಿಕೊಂಡ ಮೇಲೆ ಅವರೇ ಬರೆದುಕೊಟ್ಟಿರುವುದಾಗಿ ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀಮತಿ ಶಮೀಮುನಿಸಾ ಬೇಗಂ, ರವರು ದಿನಾಂಕ 27-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರ ಎಸಗಿರುವುದಾಗಿ ತಪ್ಪೊಪ್ಪಿಕೊಂಡಿದ್ದು, ಅವರ ಮೇಲೆ ಆರೋಪವು ಸಾಬೀತಾಗಿದ್ದು ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಮುಂದಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282–1300/2006–07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93–94/ಪಿಎಸ್‌ಸಿ ದಿನಾಂಕ 14–09–1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಶಮೀಮುನಿಸಾ ಬೇಗಂ, ನೋಂದಣಿ ಸಂಖ್ಯೆ 74131 ಟೀಚರ್, ಸರಕಾರಿ ಉರ್ದುಬಾಯ್ಸ್ ಪ್ರೈಮರಿ ಸ್ಕೂಲ್, ನಂ.8, ಕೇಶವಪುರ, ಹುಬ್ಬಳ್ಳಿ ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಕಾಜಾಮೈನುದೀನ್,(ನೋಂದಣಿ ಸಂಖ್ಯೆ74060) ಪೊಲೀಸ್ ಕಾನ್ಸ್‌ಟೇಬಲ್, ಪಿ.ಸಿ.ನಂ. 744 'ಎಫ್' ಕಾಯ್ 2ನೇ ಪಡೆ ಕೆ.ಎಸ್.ಆರ್.ಪಿ., ರಾಯಪುರ, ನವನಗರ್, ಹುಬ್ಬಳ್ಳಿ ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನ ಇಲಾಖಾ ಪರೀಕ್ಷೆಯಲ್ಲಿನ ಶ್ರೀ ಕಾಜಾ ಮೈನುದ್ದೀನ್, ನೋಂದಣಿ ಸಂಖ್ಯೆ 74060 ಇವರ ಅರ್ಜಿ ದಿನಾಂಕ 11–09–2005.
2. ಶ್ರೀ ಕಾಜಾ ಮೈನುದ್ದೀನ್, ಇವರಿಗೆ ಆಯೋಗದ ಕಛೇರಿ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006–07/ಪಿಎಸ್‌ಸಿ ದಿನಾಂಕ 15–04–2005.
3. ಶ್ರೀ ಕಾಜಾ ಮೈನುದ್ದೀನ್, ಇವರ ದಿನಾಂಕ 27–04–2006 ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಉತ್ತರ ಪತ್ರಿಕೆಯ ಪತ್ರಿಕೆ–2 ರ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ಕಾಜಾಮೈನುದೀನ್, (ನೋಂದಣಿ ಸಂಖ್ಯೆ 74060) ಪೊಲೀಸ್ ಕಾನ್ಸ್‌ಟೇಬಲ್, ಪಿ.ಸಿ.ನಂ. 744 'ಎಫ್ ಕಾಯ್ 2ನೇ ಪಡೆ ಕೆ.ಎಸ್.ಆರ್.ಪಿ., ರಾಯಪುರ, ನವನಗರ್, ಹುಬ್ಬಳ್ಳಿ–580025 ಇವರ ಉತ್ತರಪತ್ರಿಕೆಯಲ್ಲಿ ಹಸ್ತಾಕ್ಷರ ಬೇರೆಯಾಗಿದ್ದು, ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಗಿರುವುದರಿಂದ, ಅವರಿಗೆ ಮೇಲೆ ಹೇಳಿರುವ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾದ ಕಾರಣ ದಿನಾಂಕ 27–04–2006ರಂದು ಬೆಳಿಗ್ಗೆ 10.30ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ 27–04–2006 ರಂದು ಹಾಜರಾದ ಸಮಯದಲ್ಲಿ ಈ ಮುಂದಿನಂತೆ ಹೇಳಿಕೆ ನೀಡಿರುತ್ತಾರೆ. ನನಗೆ ಕನ್ನಡಭಾಷಾ ಪತ್ರಿಕೆ–2ರ ನೋಂದಣಿ ಸಂಖ್ಯೆ 74060 ಮತ್ತು 74127ರ ಎರಡು ಉತ್ತರ ಪತ್ರಿಕೆಗಳನ್ನು ತೋರಿಸಿ ಇದರಲ್ಲಿನ ಬರವಣಿಗೆಗಳು ಒಂದೇ ರೀತಿ ಇದೆ ಎಂದು ಪ್ರಶ್ನಿಸಿದ್ದು ಉತ್ತರ ಪತ್ರಿಕೆಗಳಲ್ಲಿ ಬರೆದಿದ್ದ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ನೀಡುವ ಮೂಲಕ ಬರೆಸಿದ್ದು, ಇಂಗ್ಲೀಷ್ ಭಾಷೆಯ ಬರವಣಿಗೆ ತಾಳೆಯಾಗಿಲ್ಲವೆಂದು ಒಪ್ಪಿ, ಪರೀಕ್ಷಾಕೊಠಡಿಯಲ್ಲಿ ಬಲಬದಿಯ ಸಾಲಿನಲ್ಲಿ ಕುಳಿತಿದ್ದ ಮಹಿಳಾ ಅಭ್ಯರ್ಥಿ ಬರೆದು ಕೊಟ್ಟಿರುತ್ತಾರೆ. ನಾನು ಅವರನ್ನು ಬಹಳವಾಗಿ ವಿನಂತಿಸಿಕೊಂಡಿದ್ದರ ಮೇರೆಗೆ ಬರೆದುಕೊಟ್ಟಿರುತ್ತಾರೆ. ನಾನು 9ವರ್ಷ ಸೇವೆ ಸಲ್ಲಿಸಿರುತ್ತೇನೆ. ಈ ಮೊದಲು ಒಂದು ಬಾರಿ ಕನ್ನಡಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗಿದ್ದು, ನಾನು ಬೇರೆಯವರ ಕೈಯಿಂದ ಬರೆಸಿರುವುದು ತಪ್ಪು ಎಂದು ಒಪ್ಪಿಕೊಂಡುರುತ್ತಾರೆ.

ಶ್ರೀ ಕಾಜಾಮೈನುದೀನ್‌ರವರು ದಿನಾಂಕ 27–04–2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ–2ರಲ್ಲಿ ದುರಾಚಾರ ಎಸಗಿರುವುದಾಗಿ ತಪ್ಪೊಪ್ಪಿಕೊಂಡಿದ್ದು ಅವರ ಮೇಲಿನ ಆರೋಪವು ಸಾಬೀತಾಗಿದ್ದು ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯವಗಳ 1965ರನ್ವಯ ಅವರಿಗೆ ದಂಡನೆ ವಿಧಿಸಿವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಮುಂದಿನಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282–1300/2006–07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93–94/ಪಿಎಸ್‌ಸಿ ದಿನಾಂಕ:14–09–1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಕಾಜಾಮೈನುದೀನ್, (ನೋಂದಣಿ ಸಂಖ್ಯೆ 74060) ಪೊಲೀಸ್ ಕಾನ್ಸ್‌ಟೇಬಲ್, ಪಿ.ಸಿ.ನಂ. 744 'ಎಫ್ ಕಾಯ್ 2ನೇ ಪಡೆ ಕೆ.ಎಸ್.ಆರ್.ಪಿ., ರಾಯಪುರ, ನವನಗರ್, ಹುಬ್ಬಳ್ಳಿ–580025 ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಮೊಹಮದ್ ಮುನೀರ್ ಅಹಮದ್, ವನಪಾಲಕ, ರೇಂಜ್ ಫಾರೆಸ್ಟ್ ಆಫೀಸ್, ಚಿಂಚೋಲಿರೇಂಜ್, ಚಿಂಚೋಲಿ ತಾಲ್ಲೂಕ್, ಗುಲ್ಬರ್ಗಾ ಜಿಲ್ಲೆ ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀ ಮೊಹಮದ್ ಮುನೇರ್ ಅಹಮದ್ ನೋಂದಣಿ ಸಂಖ್ಯೆ 77510 ಇವರ ಅರ್ಜಿ ದಿನಾಂಕ 22-09-2005.
2. ಶ್ರೀ ಮೊಹಮದ್ ಮುನೇರ್ ಅಹಮದ್, ಇವರಿಗೆ ಆಯೋಗದ ಕಛೇರಿ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಮೊಹಮದ್ ಮುನೇರ್ ಅಹಮದ್ ಇವರ ದಿನಾಂಕ 27-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಉತ್ತರ ಪತ್ರಿಕೆಯ ಪತ್ರಿಕೆ-1 ಮತ್ತು-2 ರ ಮೌಲ್ಯ ಮಾಪನದ ಕಾರ್ಯವನ್ನು ಆಯೋಗವು ಕೈಗೊಂಡಾಗ ಶ್ರೀ ಮೊಹಮದ್ ಮುನೀರ್ ಅಹಮದ್, ವನಪಾಲಕ, ರೇಂಜ್ ಫಾರೆಸ್ಟ್ ಆಫೀಸ್, ಚಿಂಚೋಲಿ ರೇಂಜ್, ಚಿಂಚೋಲಿ ತಾಲ್ಲೂಕ್, ಗುಲ್ಬರ್ಗಾ ಜಿಲ್ಲೆ, ಇವರ ಉತ್ತರ ಪತ್ರಿಕೆ-1 ಮತ್ತು 2ರಲ್ಲಿ ಬರವಣಿಗೆ ಬೇರೆಬೇರೆಯಾಗಿದ್ದು ಬೇರೆಯವರಿಂದ ಉತ್ತರಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿ ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾಗಿರುವ ಕಾರಣ ದಿನಾಂಕ:27-04-2006ರಂದು ಮಧ್ಯಾಹ್ನ 2.30ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ಹಾಜರಾದ ಸಮಯದಲ್ಲಿ ಸದರಿಯವರಿಗೆ ಕನ್ನಡಭಾಷಾ ಪತ್ರಿಕೆ-1 ಮತ್ತು 2ರ ಉತ್ತರಪತ್ರಿಕೆಗಳನ್ನು ತೋರಿಸಿದ್ದು, ಅವರದೇ ಎಂದು ಒಪ್ಪಿಕೊಂಡಿರುತ್ತಾರೆ ಬರವಣಿಗೆಯು ಅವರದೇ ಎಂದು ದೃಢೀಕರಿಸಿರುತ್ತಾರೆ. ಉತ್ತರಪತ್ರಿಕೆಗಳಲ್ಲಿ ಬರೆದಿದ್ದ ಕನ್ನಡ ಮತ್ತು ಇಂಗ್ಲೀಷ್ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ನೀಡುವ ಮೂಲಕ ಬರೆಸಿದ್ದು, ಪತ್ರಿಕೆ-1ರಲ್ಲಿನ ಕನ್ನಡ ಉತ್ತರದ ಬರವಣಿಗೆಗೂ ಪತ್ರಿಕೆ-2ರಲ್ಲಿನ ಕನ್ನಡಕ್ಕೂ ತಾಳೆಯಾಗುತ್ತಿಲ್ಲವಾದ್ದರಿಂದ ಇದರ ಬಗ್ಗೆ ಪ್ರಶ್ನಿಸಿದ ಬಗ್ಗೆ ಪತ್ರಿಕೆ-1ರಲ್ಲಿನ ಹಸ್ತಾಕ್ಷರವು ಅವರದಾಗಿದ್ದು ಪತ್ರಿಕೆ-2ರಲ್ಲಿನ ಕನ್ನಡ ಹಸ್ತಾಕ್ಷರ ಅವರದಲ್ಲವೆಂದು ಒಪ್ಪಿಕೊಂಡಿರುತ್ತಾರೆ. ಅವರ ಬಲಬದಿಯಲ್ಲಿ ಕುಳಿತಿರುವ ಅಭ್ಯರ್ಥಿಯಿಂದ ಬರೆಯಿಸಿಕೊಂಡಿರುವೆನು. ಒಂದೇ ಡೆಸ್ಕಿನಲ್ಲಿ ಮೂರು ಜನಕ್ಕೆ ಪರೀಕ್ಷೆ ಬರೆಯಲು ಸ್ಥಳಾವಾಕಾಶ ಇದ್ದು, ಅವರು ಅನುಕಂಪದ ಆಧಾರದ ಮೇಲೆ ನೇಮಕವಾಗಿದ್ದು ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಅವಶ್ಯಕವಾಗಿರುತ್ತದೆ. ಈ ಬಾರಿ ತೇರ್ಗಡೆ ಹೊಂದದೆ ಇದ್ದರೆ ನೌಕರಿಯನ್ನು ಕಳೆದುಕೊಳ್ಳಬೇಕಾಗುತ್ತದೆ ಎಂಬ ಭಯದಿಂದ ಈ ರೀತಿ ಮಾಡಿರುವೆನು ಇದು ತಪ್ಪೆಂದು ತಿಳಿದಿದ್ದರೂ ಸಹ ತಪ್ಪು ಮಾಡಿರುವುದು ಒಪ್ಪಿಕೊಂಡಿರುತ್ತಾರೆ.

ಶ್ರೀ ಮೊಹಮದ್ ಮುನೀರ್ ಅಹಮದ್‌ರವರು ದಿನಾಂಕ 27-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರ ಎಸಗಿರುವುದಾಗಿ ತಪ್ಪೊಪ್ಪಿಕೊಂಡಿದ್ದು ಅವರ ಮೇಲಿನ ಆರೋಪವು ಸಾಬೀತಾಗಿದ್ದು ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸಿವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಮೊಹಮದ್ ಮುನೀರ್ ಅಹಮದ್, ವನಪಾಲಕ, ರೇಂಜ್ ಫಾರೆಸ್ಟ್ ಆಫೀಸ್, ಚಿಂಚೋಲಿ ರೇಂಜ್, ಚಿಂಚೋಲಿ ತಾಲ್ಲೂಕ್, ಗುಲ್ಬರ್ಗಾ ಜಿಲ್ಲೆ, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ರಾಜೇಶ್ ಮಧುಕರ್ ರಾಣೆ, ಫೈರ್ ಮನ್ ಅಗ್ನಿ ಶಾಮಕಠಾಣೆ, ಖಜುಬಾಗ್ ರೋಡ್, ಕಾರವಾರ ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ರಾಜೇಶ್ ಮಧುಕರ್ ರಾಣೆ, ನೋಂದಣಿ ಸಂಖ್ಯೆ 82134 ಇವರ ಅರ್ಜಿ ದಿನಾಂಕ 18-09-2005.

2. ಶ್ರೀ ರಾಜೇಶ ಮಧುಕರ್ ರಾಣೆ, ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ರಾಜೇಶ ಮಧುಕರ್‌ರಾಣೆ ಇವರ ದಿನಾಂಕ 26-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಉತ್ತರಪತ್ರಿಕೆ-2ರ ಮೌಲ್ಯಮಾಪನದ ಕಾರ್ಯವನ್ನು ಆಯೋಗವು ಕೈಗೊಂಡಾಗ ಶ್ರಿ ರಾಜೇಶ್ ಮಧುಕರ್ ರಾಣೆ, ಫೈರ್ ಮನ್, ಅಗ್ನಿ ಶಾಮಕಠಾಣೆ, ಖಜುಬಾಣ್ ರೋಡ್, ಕಾರವಾರ, ಇವರ ಉತ್ತರಪತ್ರಿಕೆ-2ರಲ್ಲಿನ ಹಸ್ತಾಕ್ಷರ ವಿಭಿನ್ನವಾಗಿದ್ದು, ಬೇರೆಯವರಿಂದ ಉತ್ತರಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾಗಿರುವ ಕಾರಣ ದಿನಾಂಕ:26-04-2006ರಂದು ಮಧ್ಯಾಹ್ನ 2.30ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ 26-04-2006 ರಂದು ಹಾಜರಾದ ಸಮಯದಲ್ಲಿ ನನಗೆ ಕನ್ನಡಭಾಷಾ ಪತ್ರಿಕೆ-2ರ ನೋಂದಣಿ ಸಂಖ್ಯೆ 82134 ಮತ್ತು 82138 ಎರಡು ಉತ್ತರ ಪತ್ರಿಕೆಗಳನ್ನು ತೋರಿಸಿ ಇದರಲ್ಲಿನ ಬರವಣಿಗೆಗಳು ವ್ಯತ್ಯಾಸ ಹೇಗೆ ಉಂಟಾಗಿದೆ ಎಂದು ಪ್ರಶ್ನಿಸಿದ್ದು, ಉತ್ತರಪತ್ರಿಕೆಗಳ ಕೆಲವು ಸಾಲುಗಳನ್ನು ಉತ್ತಲೇಖನ ಬರೆಯಿಸಿದ್ದು ಬರೆದ ಬರವಣಿಗೆಯ ಪತ್ರಿಕೆ-2ರಲ್ಲಿನ ಕನ್ನಡ ಅನುವಾದವನ್ನು ಪಕ್ಕದ ಅಭ್ಯರ್ಥಿಯವರಿಂದ ಬರೆಸಿರುವುದಾಗಿ ಕನ್ನಡದಿಂದ ಆಂಗ್ಲ ಭಾಷೆಗೆ ತರ್ಜುಮೆಯನ್ನು ನನ್ನ ಮುಂದೆ ಕುಳಿತಿದ್ದ ಅಭ್ಯರ್ಥಿ ಕಡೆಯಿಂದ ಬರೆಸಿಕೊಂಡಿರುತ್ತೇನೆ. ಈ ಎರಡು ಪ್ರಶ್ನೆಗಳ ಉತ್ತರಗಳನ್ನು ಎರಡು ಪ್ರಶ್ನೆಗಳನ್ನು ಅವರು ಬರೆದಿರುವುದಿಲ್ಲ. ವಾರ್ಷಿಕ ವೇತನ ಬಡ್ತಿಯನ್ನು ಪಡೆಯುವ ಒಂದೇ ಒಂದು ಕಾರಣಕ್ಕಾಗಿ ಈ ರೀತಿ ಮಾಡಿರುತ್ತೇನೆಂದು ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀ ರಾಜೇಶ್ ಮಧುಕರ್ ರಾಣೆ, ರವರು ದಿನಾಂಕ:26-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ:14-09-1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ರಾಜೇಶ್ ಮಧುಕರ್ ರಾಣೆ, ಫೈರ್ ಮನ್ ಆಗ್ನಿ ಶಾಮಕಠಾಣೆ, ಖಜುಬಾಣ್ ರೋಡ್, ಕಾರವಾರ ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಹುಸೇನ್ ಸಾಬ್ ಚಂದಾಸಾಬ್ ದಲೇಲ್, ಹೆಡ್‌ಕಾನ್ಸ್‌ಟೇಬಲ್, ಪೊಲೀಸ್ ಹೆಡ್‌ಕ್ವಾರ್ಟರ್ಸ್ ಧಾರವಾಡ, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀ ಹುಸೇನ್ ಸಾಬ್ ಚಂದಾಸಾಬ್ ದಲೇಲ್, ನೋಂದಣಿ ಸಂಖ್ಯೆ 74048 ಇವರ ಅರ್ಜಿ ದಿನಾಂಕ 05-09-2005.
2. ಶ್ರೀ ಹುಸೇನ್ ಸಾಬ್ ಚಂದಾಸಾಬ್ ದಲೇಲ್, ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಹುಸೇನ್‌ಸಾಬ್ ಚಂದಾಸಾಬ್ ದಲೇಲ್ ಇವರ ದಿನಾಂಕ 26-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-2 ರ ಉತ್ತರ ಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಆಯೋಗವು ಕೈಗೊಂಡಾಗ ಶ್ರೀ ಹುಸೇನ್ ಸಾಬ್ ಚಂದಾಸಾಬ್ ದಲೇಲ್, ಹೆಡ್‌ಕಾನ್ಸ್‌ಟೇಬಲ್, ಪೊಲೀಸ್ ಹೆಡ್ ಕ್ವಾರ್ಟರ್ಸ್, ಧಾರವಾಡ-08 ಇವರ ನೋಂದಣಿ ಸಂಖ್ಯೆ: 74048, ಇವರ ಉತ್ತರಪತ್ರಿಕೆಯಲ್ಲಿ ಹಸ್ತಾಕ್ಷರ ಬೇರೆಯಾಗಿದ್ದು, ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿ ಪಡೆಯಬೇಕಾಗಿರುವ ಕಾರಣ ದಿನಾಂಕ 26-04-2006ರಂದು

ಮಧ್ಯಾಹ್ನ 2.30ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ 26-04-2006ರಂದು ಹಾಜರಾದ ಸಮಯದಲ್ಲಿ ನನಗೆ ಕನ್ನಡಭಾಷಾ ಪತ್ರಿಕೆ-2ರ ನೋಂದಣಿ ಸಂಖ್ಯೆ 74048 ಮತ್ತು 74127ರ ಎರಡು ಉತ್ತರಪತ್ರಿಕೆಗಳನ್ನು ತೋರಿಸಿ ಆಂಗ್ಲ ಬರವಣಿಗೆ ಒಂದೇ ಆಗಿದೆ ಅದು ಹೇಗೆ ಎಂದು ಕೇಳಲಾಗಿ ನೋಂದಣಿ ಸಂಖ್ಯೆ 74127ರ ಅಭ್ಯರ್ಥಿಯು ನನ್ನ ಬಲಬದಿಯಲ್ಲಿ ಕುಳಿತಿದ್ದು ಅವರಿಗೆ ಬಹಳವಾಗಿ ವಿನಂತಿಸಿಕೊಂಡಿದ್ದು, ನನ್ನ ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿದಿರುವುದಾಗಿ ಹಾಗೂ ನಾಲ್ಕು ಬಾರಿ ಪರೀಕ್ಷೆಗೆ ಕುಳಿತು ಅನುತ್ತೀರ್ಣನಾಗಿರುವೆನು, ಬರೆದುಕೊಡಿ ಎಂದು ಕೇಳಿಕೊಂಡಿದ್ದರಿಂದ, ಹಾಗೂ ನಾಲ್ಕು ಬಾರಿ ಪರೀಕ್ಷೆಗೆ ಕುಳಿತು ಅನುತ್ತೀರ್ಣನಾಗಿದ್ದು, ವಾರ್ಷಿಕ ವೇತನ ಬಡ್ತಿ ಪಡೆಯುವ ಒಂದೇ ಒಂದು ಉದ್ದೇಶದಿಂದ ಈ ರೀತಿ ಮಾಡಿರುತ್ತೇನೆ ಎಂದು ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀ ಹುಸೇನ್ ಸಾಬ್ ಚಂದಾಸಾಬ್ ದಲೇಲ್, ರವರು ದಿನಾಂಕ: 26-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಹುಸೇನ್ ಸಾಬ್ ಚಂದಾಸಾಬ್ ದಲೇಲ್, ಹೆಡ್‌ಕಾನ್ಸ್‌ಟೇಬಲ್, ಪೊಲೀಸ್ ಹೆಡ್‌ಕ್ವಾರ್ಟರ್ಸ್, ಧಾರವಾಡ-08 ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀಮತಿ ಸವಿತಾ ಕಟ್ಟಿಗೆನ್ನವರ್, ಸಹಾಯಕ ಅಭಿಯಂತರರು, ವಾಟರ್ ಅಂಡ್ ಲ್ಯಾಂಡ್ ಮ್ಯಾನೇಜ್‌ಮೆಂಟ್ ಇನ್‌ಸ್ಟ್ಯೂಟ್, ಬೇಲೂರು ಇಂಡಸ್ಟ್ರೀಯಲ್ ಏರಿಯಾ, ಧಾರವಾಡ-580011, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀಮತಿ ಸವಿತಾ ಕಟ್ಟಿಗೆನ್ನವರ್ ನೋಂದಣಿ ಸಂಖ್ಯೆ 74127 ಇವರ ಅರ್ಜಿ ದಿನಾಂಕ 21-09-2005.
2. ಶ್ರೀಮತಿ ಸವಿತಾ ಕಟ್ಟಿಗೆನ್ನವರ್ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ:ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀಮತಿ ಸವಿತಾ ಕಟ್ಟಿಗೆನ್ನವರ್ ಇವರ ದಿನಾಂಕ 26-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಉತ್ತರ ಪತ್ರಿಕೆಯ ಪತ್ರಿಕೆ-2 ರ ಮೌಲ್ಯ ಮಾಪನದ ಕಾರ್ಯವನ್ನು ಆಯೋಗವು ಕೈಗೊಂಡಾಗ ಶ್ರೀಮತಿ ಸವಿತಾ ಕಟ್ಟಿಗೆನ್ನವರ್, ಸಹಾಯಕ ಅಭಿಯಂತರರು, ವಾಟರ್ ಅಂಡ್ ಲ್ಯಾಂಡ್ ಮ್ಯಾನೇಜ್‌ಮೆಂಟ್ ಇನ್‌ಸ್ಟ್ಯೂಟ್, ಬೇಲೂರು ಇಂಡಸ್ಟ್ರೀಯಲ್ ಏರಿಯಾ, ಧಾರವಾಡ-580011, ನೋಂದಣಿ ಸಂಖ್ಯೆ: 74127, ಇವರ ಉತ್ತರ ಪತ್ರಿಕೆಯಲ್ಲಿ ಬರವಣಿಗೆ ಒಂದೇ ಆಗಿದ್ದು ಬೇರೆಯವರಿಗೆ ಉತ್ತರಬರೆದುಕೊಟ್ಟಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾಗಿರುವ ಕಾರಣ ದಿನಾಂಕ 26-04-2006ರಂದು ಬೆಳಿಗ್ಗೆ 10.30ಘಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ: 26-04-2006ರಂದು ಹಾಜರಾದ ಸಮಯದಲ್ಲಿ ಈ ಮುಂದಿನಂತೆ ಹೇಳಿಕೆ ನೀಡಿರುತ್ತಾರೆ. ನನಗೆ ಕನ್ನಡಭಾಷಾ ಪತ್ರಿಕೆ-2ರ ನೋಂದಣಿ ಸಂಖ್ಯೆ 74127, 74060 ಮತ್ತು 74048ರ ಮೂರು ಉತ್ತರಪತ್ರಿಕೆಗಳನ್ನು ತೋರಿಸಿ ಇದರಲ್ಲಿನ ಬರವಣಿಗೆಗಳು ಒಂದೇ ರೀತಿ ಇದೆಯೆಂದು ಪ್ರಶ್ನಿಸಿದ್ದು, ಮೂರು ಉತ್ತರಪತ್ರಿಕೆಗಳಲ್ಲಿ ಬರೆದ ಆಂಗ್ಲ ಭಾಷೆ ಬರವಣಿಗೆಯು ನನ್ನದೆಯೆಂದಿದ್ದು, ಅದು ಹೇಗೆ ಎಂದು ಕೇಳಾಲಾಗಿ ಶ್ರೀ ಕಾಜಾಮೊಹಿದ್ದೀನ್ ಮತ್ತು ಶ್ರೀ ಹುಸೇನ್‌ಸಾಬ್ ಚಂದಾಸಾಬ್ ದಲೇಲ್, ಇವರಿಬ್ಬರೂ ನನ್ನ ಎಡಬದಿಯ ಪಕ್ಕದ ಸಾಲಿನಲ್ಲಿ ಕುಳಿತಿದ್ದು, ಉತ್ತರಬರೆದುಕೊಡುವಂತೆ ಹಲವಾರು ಬಾರಿ ಕೇಳಿಕೊಂಡರು. ನಾನು ತಿರಸ್ಕರಿಸಿದರೂ ಮತ್ತೆ ಮತ್ತೇ ಕೇಳಿಕೊಂಡಿದ್ದರಿಂದ ಅವರ ಮೇಲೆ ಕನಿಕರಪಟ್ಟು ಸಹಾಯ ಮಾಡುವ ಉದ್ದೇಶದಿಂದ ನಾನೇ ಬರೆದುಕೊಟ್ಟಿರುವುದಾಗಿ ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀಮತಿ ಸವಿತಾ ಕಟ್ಟಿಗೆನ್ನವರ್, ರವರು ದಿನಾಂಕ: 26-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ:14-09-1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಸವಿತಾ ಕಟ್ಟಿಗೆನ್ನವರ್, ಸಹಾಯಕ ಅಭಿಯಂತರರು, ವಾಟರ್ ಅಂಡ್ ಲ್ಯಾಂಡ್ ಮ್ಯಾನೇಜ್‌ಮೆಂಟ್ ಇನ್‌ಸ್ಟ್ಯೂಟ್, ಬೇಲೂರು ಇಂಡಸ್ಟ್ರೀಯಲ್ ಏರಿಯಾ, ಧಾರವಾಡ-580011, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀಮತಿ ಅಮೀನಾ ಬೇಗಂ, ಕಿರಿಯ ದರ್ಜೆ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀಮತಿ ಅಮೀನಾ ಬೇಗಂ, ನೋಂದಣಿ ಸಂಖ್ಯೆ: 91009 ಇವರ ಅರ್ಜಿ ದಿನಾಂಕ 05-09-2005.
2. ಶ್ರೀಮತಿ ಅಮೀನಾ ಬೇಗಂ, ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀಮತಿ ಅಮೀನಾ ಬೇಗಂ, ಇವರ ದಿನಾಂಕ 26-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-1 ಮತ್ತು-2 ರ ಉತ್ತರಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಆಯೋಗವು ಕೈಗೊಂಡಾಗ ಶ್ರೀಮತಿ ಅಮೀನಾ ಬೇಗಂ, ಕಿರಿಯ ದರ್ಜೆ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು-584101, ನೋಂದಣಿ ಸಂಖ್ಯೆ:91009, ಇವರ ಉತ್ತರಪತ್ರಿಕೆ ಬರವಣಿಗೆ ಗಮನಿಸಿದಾಗ ಬೇರೆಯವರಿಂದ ಉತ್ತರಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾಗಿರುವ ಕಾರಣ ದಿನಾಂಕ:26-04-2006ರಂದು ಬೆಳಿಗ್ಗೆ 10.30ಗಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ:26-04-2006 ರಂದು ಹಾಜರಾದ ಸಮಯದಲ್ಲಿ ನೋಂದಣಿ ಸಂಖ್ಯೆ 91009 ಮತ್ತು 91013ರ ಎರಡು ಉತ್ತರಪತ್ರಿಕೆಗಳನ್ನು ತೋರಿಸಿ ಇದರಲ್ಲಿ ಬರವಣಿಗೆಗಳು ಒಂದೇ ರೀತಿ ಇದೆ ಎಂದು ಪ್ರಶ್ನಿಸಿದ್ದು, ಉತ್ತರಪತ್ರಿಕೆಗಳಲ್ಲಿ ಬರೆದಿದ್ದ, ಕನ್ನಡ ಮತ್ತು ಇಂಗ್ಲೀಷ್ ಭಾಷೆ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ಹೇಳಿ ಬರೆಯಿಸಿದ್ದೀರಿ. ಪತ್ರಿಕೆ-1ರ ಬರವಣಿಗೆ ನನ್ನದೆಂದು ಒಪ್ಪಿಕೊಂಡಿರುತ್ತೇನೆ. ಆದರೆ ಪತ್ರಿಕೆ-2ರ ಕನ್ನಡ ಮತ್ತು ಆಂಗ್ಲ ಭಾಷೆಯ ಎರಡು ಉತ್ತರಗಳ ಬರವಣಿಗೆಯು ನನ್ನದಲ್ಲವೆಂದು ಪಕ್ಕದಲ್ಲಿ ಕುಳಿತಿದ್ದ ಅಭ್ಯರ್ಥಿಯಿಂದ ಬರೆಸಿರುತ್ತೇನೆಂದು ಒಪ್ಪಿಕೊಂಡಿರುತ್ತಾರೆ. ಆ ಸಮಯದಲ್ಲಿ ಅವರು ಉತ್ತರಪತ್ರಿಕೆಯನ್ನು ನನ್ನ ಬಳಿ ಇಟ್ಟುಕೊಂಡು ನನ್ನ ಉತ್ತರಪತ್ರಿಕೆಯನ್ನು ಅವರ ಬಳಿ ನೀಡಿರುತ್ತೇನೆ. ಇದು ತಪ್ಪು ಎಂದು ಒಪ್ಪಿಕೊಂಡಿರುತ್ತಾರೆ.

ಶ್ರೀಮತಿ ಅಮೀನಾ ಬೇಗಂ, ರವರು ದಿನಾಂಕ: 26-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಮುಂದಿನಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ:14-09-1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಅಮೀನಾ ಬೇಗಂ, ಕಿರಿಯ ದರ್ಜೆ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು-584101, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ನಾಗರಾಜ ಮರಿವ್ವ ಮಾಯಪ್ಪನವರ್, ಪೊಲೀಸ್ ಪೇದೆ, ನಂ. 344, 'ಎ' ಕಾಯ್ ಎಕ್ಸ್‌ಬಿಎನ್, ಕೆಎಸ್‌ಆರ್‌ಪಿ. ಶಿಗ್ಗಾಂವ್, ಹಾವೇರಿ ಜಿಲ್ಲೆ, ಇವರು ಕನ್ನಡ ಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀ ನಾಗರಾಜ ಮರಿವ್ವ ಮಾಯಾಪ್ಪನವರ್, ನೋಂದಣಿ ಸಂಖ್ಯೆ 81081 ಇವರ ಅರ್ಜಿ ದಿನಾಂಕ 23-09-2005.
2. ಶ್ರೀ ನಾಗರಾಜ ಮರಿವ್ವ ಮಾಯಪ್ಪನವರ್ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ:ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ನಾಗರಾಜ ಮರಿವ್ವ ಮಾಯಪ್ಪನವರ್ ಇವರ ದಿನಾಂಕ:25-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-2ರ ಉತ್ತರಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ನಾಗರಾಜ ಮರಿವ್ವ ಮಾಯಪ್ಪನವರ್, ಪೊಲೀಸ್ ಪೇದೆ, ನಂ. 344, 'ಎ' ಕಾಯ್ ಎಕ್ಸ್‌ಬಿಎನ್, ಕೆಎಸ್‌ಆರ್‌ಪಿ. ಶಿಗ್ಗಾಂವ್, ಹಾವೇರಿ ಜಿಲ್ಲೆ, ನೋಂದಣಿ ಸಂಖ್ಯೆ: 81081, ಇವರ ಉತ್ತರಪತ್ರಿಕೆಯಲ್ಲಿ ಹಸ್ತಾಕ್ಷರ ಬೇರೆಯಾಗಿದ್ದು, ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿ ಪಡೆಯಬೇಕಾಗಿರುವ ಕಾರಣ ದಿನಾಂಕ:25-04-2006ರಂದು ಮಧ್ಯಾಹ್ನ 2.30ಘಂಟೆಗೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ 25-04-2006 ರಲ್ಲಿ ಹಾಜರಾದ ಸಮಯದಲ್ಲಿ ನನಗೆ ಕನ್ನಡಭಾಷಾ ಪತ್ರಿಕೆ-2ರ ನೋಂದಣಿ ಸಂಖ್ಯೆ 81081ರ ಉತ್ತರಪತ್ರಿಕೆ ನನ್ನದೆಂದು ಒಪ್ಪಿಕೊಂಡಿರುತ್ತೇನೆ. ಆಗ ಅವರಿಗೆ ಬಿಳಿ ಹಾಳೆಕೊಟ್ಟು ಅವರು ಉತ್ತರಪತ್ರಿಕೆಯಲ್ಲಿ ಬರೆದಿದ್ದ ಕನ್ನಡ ಮತ್ತು ಇಂಗ್ಲೀಷ್ ಎರಡು ಭಾಷೆಯ ಉತ್ತರಗಳನ್ನು ಕೆಲವು ಸಾಲುಗಳ ಉತ್ತಲೇಖನ ಹೇಳಿಸಿ ಬರೆಯಿಸಿದ್ದು, ಕನ್ನಡ ಭಾಷಾ ಪತ್ರಿಕೆ-2ರಲ್ಲಿನ ಬರವಣಿಗೆಯು ಈಗ ಬರೆದಿರುವ ಬರವಣಿಗೆಗೆ ತಾಳೆಯಾಗದಿರುವುದರಿಂದ ಇದು ಹೇಗೆ ಸಾಧ್ಯವೆಂದು ವಿಚಾರಿಸಿದ ಕಾರಣ ಸದರಿ ಉತ್ತರಪತ್ರಿಕೆಯಲ್ಲಿನ ಬರವಣಿಗೆಯು ನನ್ನದಲ್ಲ ನನ್ನ ಚಿಕ್ಕಪ್ಪನ ಮಗ ಬರೆದುಕೊಟ್ಟಿರುವುದಾಗಿ ಒಪ್ಪಿಕೊಂಡಿರುತ್ತಾರೆ. ಪರೀಕ್ಷಾ ಕೊಠಡಿಯಲ್ಲಿ ಹಾಜರಾತಿ ಹಾಳೆಗೆ ಸಹಿ ಹಾಕಿದ ನಂತರ ನಾನು ಪರೀಕ್ಷಾ ಕೊಠಡಿಯಿಂದ ಹೊರಗೆ ಹೋಗಿದ್ದು, ನನ್ನ ತಮ್ಮ ಬಂದು ಆ ಜಾಗದಲ್ಲಿ ಕುಳಿತು ಪರೀಕ್ಷೆಯು ಬರೆದಿರುತ್ತಾರೆ. ಪತ್ರಿಕೆ-2ರಲ್ಲಿನ ಆಂಗ್ಲ ಭಾಷೆಗೆ ತರ್ಜುಮೆ ಮಾಡುವ ಪ್ರಶ್ನೆ ಇದ್ದುದರಿಂದ ಆಂಗ್ಲ ಭಾಷೆ ಬರುವುದಿಲ್ಲವಾದುದರಿಂದ ನನ್ನ ತಮ್ಮನಿಂದ ಬರೆಯಿಸಿರುತ್ತೇನೆ. ನಾನು ಪರೀಕ್ಷಾ ಕೊಠಡಿಯಿಂದ ಹೊರಗೆ ಹೋಗಿರುವುದು ಅಲ್ಲಿನ ಪರಿವೀಕ್ಷಕರ ಗಮನಕ್ಕೆ ಬಂದಿರುವುದಿಲ್ಲ ಎಂದು ಕಾಣುತ್ತದೆ. ಪರೀಕ್ಷೆ ಪೂರ್ತಿ ಬರೆದು ನನ್ನ ತಮ್ಮನೇ ಉತ್ತರ ಪತ್ರಿಕೆಯನ್ನು ಪರಿವೀಕ್ಷಕರಿಗೆ ಒಪ್ಪಿಸಿ ಪರೀಕ್ಷಾ ಕೊಠಡಿಯಿಂದ ಹೊರಗೆ ಬಂದಿರುತ್ತಾರೆ.

ನಾನು ಈ ರೀತಿ ಮಾಡಿದ್ದು ತಪ್ಪು ಎಂದು ತಿಳಿದಿದೆ. ಆದರೆ ಈ ಬಾರಿ ಕನ್ನಡ ಭಾಷಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದೇ ಇದ್ದರೆ ಕೆಲಸದಿಂದ ತೆಗೆದುಹಾಕುವುದಾಗಿ ನನ್ನ ಇಲಾಖಾ ಮುಖ್ಯಸ್ಥರು ಸೂಚನೆ ನೀಡಿರುವುದರ ಹಿನ್ನೆಲೆಯಲ್ಲಿ ಎಲ್ಲಿ ಕೆಲಸ ಹೋಗುವುದೋ ಎಂಬ ಭಯದಿಂದ ನನ್ನ ತಮ್ಮನ ಕೈಯಿಂದ ಪರೀಕ್ಷೆ ಬರೆಸಿರುತ್ತೇನೆ. ಆದ ಕಾರಣ ದಯಮಾಡಿ ನನ್ನನ್ನು ಈ ಬಾರಿ ಕ್ಷಮಿಸಬೇಕಾಗಿ ಕೇಳಿಕೊಂಡಿರುತ್ತಾರೆ.

ಶ್ರೀ ನಾಗರಾಜ ಮರಿವ್ವ ಮಾಯಪ್ಪನವರ್, ರವರು ದಿನಾಂಕ:26-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ನಾಗರಾಜ ಮರಿವ್ವ ಮಾಯಪ್ಪನವರ್, ಪೊಲೀಸ್ ಪೇದೆ, ನಂ. 344, 'ಎ' ಕಾಯ್ ಎಕ್ಸ್‌ಬಿಎನ್, ಕೆಎಸ್‌ಆರ್‌ಪಿ. ಶಿಗ್ಗಾಂವ್, ಹಾವೇರಿ ಜಿಲ್ಲೆ, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀಮತಿ ಶಾಜಾದ್ ಬಿ ಅಬ್ದುಲ್ ಮಜಿದ್ ಬಂಡಿಗೇರಿ, ಟೀಚರ್, ಉರ್ದು ಬಾಯ್ಸ್ ಸ್ಕೂಲ್, ನಂ.8, ಕೇಶವಾಪುರ್, ಆಜಾದ್ ಕಾಲೋನಿ, ಹುಬ್ಬಳ್ಳಿ, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀಮತಿ ಶಾಜಾದ್ ಬಿ ಅಬ್ದುಲ್ ಮಜಿದ್ ಬಂಡಿಗೇರಿ, ನೋಂದಣಿ ಸಂಖ್ಯೆ 74135 ಇವರ ಅರ್ಜಿ ದಿನಾಂಕ 22–09–2005.
2. ಶ್ರೀಮತಿ ಶಾಜಾದ್ ಬಿ ಅಬ್ದುಲ್ ಮಾಜಿದ್ ಬಂಡಿಗೇರಿ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006–07/ಪಿಎಸ್‌ಸಿ ದಿನಾಂಕ:15–04–2006.
3. ಶ್ರೀಮತಿ ಶಾಜಾದ್ ಬಿ ಅಬ್ದುಲ್ ಮಜಿದ್ ಬಂಡಿಗೇರಿ ಇವರ ದಿನಾಂಕ:25–04–2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ–2 ರ ಉತ್ತರ ಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀಮತಿ ಶಾಜಾದ್ ಬಿ ಅಬ್ದುಲ್ ಮಜಿದ್ ಬಂಡಿಗೇರಿ, ಟೀಚರ್, ಉರ್ದು ಬಾಯ್ಸ್ ಸ್ಕೂಲ್, ನಂ.8, ಕೇಶವಾಪುರ್, ಆಜಾದ್ ಕಾಲೋನಿ, ಹುಬ್ಬಳ್ಳಿ, ನೋಂದಣಿ ಸಂಖ್ಯೆ 74135, ನೋಂದಣಿ ಸಂಖ್ಯೆ. 74131 ಇವರುಗಳ ಉತ್ತರಪತ್ರಿಕೆಯಲ್ಲಿ ಒಂದೇ ರೀತಿ ಇದ್ದು ಅದು ನನ್ನದೆಂದು ದೃಢೀಕರಿಸಿರುತ್ತಾರೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾಗಿರುವ ಕಾರಣ ದಿನಾಂಕ:25–04–06 ರಂದು ಮಧ್ಯಾಹ್ನ 2.30ಗಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ 25–04–2006ರಲ್ಲಿ ಹಾಜರಾದ ಸಮಯದಲ್ಲಿ ನನಗೆ ಕನ್ನಡಭಾಷಾ ಪತ್ರಿಕೆ–2ರ ನೋಂದಣಿ ಸಂಖ್ಯೆ 74131 ಮತ್ತು 74135ರ ಎರಡು ಉತ್ತರಪತ್ರಿಕೆಗಳನ್ನು ತೋರಿಸಿ ಇದರಲ್ಲಿ ಬರವಣಿಗೆಗಳು ಒಂದೇ ರೀತಿ ಇದೆ ಎಂದು ಪ್ರಶ್ನಿಸಿದ್ದು, ಉತ್ತರಪತ್ರಿಕೆಗಳಲ್ಲಿ ಬರೆದಿದ್ದ, ಕನ್ನಡ ಮತ್ತು ಇಂಗ್ಲೀಷ್ ಎರಡು ಭಾಷೆಯ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ಬರೆಸಿದ್ದು ಎರಡು ಉತ್ತರಪತಿಕ್ರೆಯ ಬರಣಿಗೆಯು ಒಂದೇ ಆಗಿದ್ದು, ಅದು ಹೇಗೆ ಎಂದು ಕೇಳಲಾಗಿ ಶ್ರೀಮತಿ ಶಮೀಮುನಿಸಾ ಬೇಗಂ ರವರು ನನ್ನ ಸಹದ್ಯೋಗಿಯಾಗಿದ್ದು ಲಘು ಲಘು ಬರೆಯುವುದಕ್ಕೆ ಬರೆಯಲು ಸಾಧ್ಯವಿಲ್ಲವಿರುವುದರಿಂದ ಅವರಿಗೆ ಸಹಾಯ ಮಾಡುವ ಉದ್ದೇಶದಿಂದ ನಾನೇ ಬರೆದುಕೊಟ್ಟಿರುವುದಾಗಿ ಒಪ್ಪಿಕೊಂಡಿರುತ್ತಾರೆ.

ಶ್ರೀಮತಿ ಶಾಜಾದ್ ಬಿ ಅಬ್ದುಲ್ ಮಜಿದ್ ಬಂಡಿಗೇರಿ, ರವರು ದಿನಾಂಕ: 25–04–2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ–2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282–1300/2006–07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93–94/ಪಿಎಸ್‌ಸಿ ದಿನಾಂಕ 14–09–1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಶಾಜಾದ್ ಬಿ ಅಬ್ದುಲ್ ಮಜಿದ್ ಬಂಡಿಗೇರಿ, ಟೀಚರ್, ಉರ್ದು ಬಾಯ್ಸ್ ಸ್ಕೂಲ್, ನಂ.8, ಕೇಶವಾಪುರ್, ಆಜಾದ್ ಕಾಲೋನಿ, ಹುಬ್ಬಳ್ಳಿ, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಮೊಹಮ್ಮದ್ ಮಿಸಾಕ್ ಉರ್ ರೆಹಮಾನ್, ಪೊಲೀಸ್ ಕಾನ್ಸ್‌ಟೇಬಲ್ ನಂ. 317, ಗ್ರಾಮಾಂತರ ಪೊಲೀಸ್ ಠಾಣೆ, ಗಂಗಾವತಿ, ಕೊಪ್ಪಳ, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀ ಮೊಹಮ್ಮದ್ ಮಿಸಾಕ್ ಉರ್ ರೆಹಮಾನ್ ನೋಂದಣಿ ಸಂಖ್ಯೆ 85077 ಇವರ ಅರ್ಜಿ.
2. ಶ್ರೀ ಮೊಹಮ್ಮದ್ ಮಿಸಾಕ್ ಉರ್ ರೆಹಮಾನ್ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ:ಆರ್‌ಹೆಚ್‌ಎಸ್ 01/2006–07/ಪಿಎಸ್‌ಸಿ ದಿನಾಂಕ:15–04–2006.
3. ಶ್ರೀ ಮೊಹಮ್ಮದ್ ಮಿಸಾಕ್ ಉರ್ ರೆಹಮಾನ್ ಇವರ ದಿನಾಂಕ:25–04–2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-1ರ ಉತ್ತರಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ಮೊಹಮ್ಮದ್ ಮಿಸಾಕ್ ಉರ್ ರೆಹಮಾನ್, ಪೊಲೀಸ್ ಕಾನ್ಸ್‌ಟೇಬಲ್ ನಂ. 317, ಗ್ರಾಮಾಂತರ ಪೊಲೀಸ್ ಠಾಣೆ, ಗಂಗಾವತಿ, ಕೊಪ್ಪಳ, ನೋಂದಣಿ ಸಂಖ್ಯೆ:85077ರ ಇವರ ಉತ್ತರಪತ್ರಿಕೆಯಲ್ಲಿ ಹಸ್ತಾಕ್ಷರ ಬೇರೆಯಾಗಿದ್ದು, ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿ ಪಡೆಯಬೇಕಾಗಿರುವ ಕಾರಣ ದಿನಾಂಕ:25-04-2006ರಂದು ಮಧ್ಯಾಹ್ನ 2.30ಘಂಟೆಗೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಆಯೋಗದ ಉಪಕಾರ್ಯದರ್ಶಿಯವರ ಮುಂದೆ 25-04-2006ರಲ್ಲಿ ಹಾಜರಾದ ಸಮಯದಲ್ಲಿ ನನಗೆ ಕನ್ನಡಭಾಷಾ ಪತ್ರಿಕೆ-1ರ ನೋಂದಣಿ ಸಂಖ್ಯೆ 85077 ಮತ್ತು 85134ರ ಎರಡು ಉತ್ತರಪತ್ರಿಕೆಗಳನ್ನು ತೋರಿಸಿ ಇದರಲ್ಲಿನ ಬರವಣಿಗೆಗಳು ಒಂದೇ ರೀತಿ ಆಗಿದೆ ಎಂದು ಪ್ರಶ್ನಿಸಿದ್ದು ಉತ್ತರಪತ್ರಿಕೆಯಲ್ಲಿ ನಾನು ಬರೆದಿದ್ದ ಕನ್ನಡ ಮತ್ತು ಇಂಗ್ಲೀಷ್ ಎರಡು ಭಾಷೆಗಳ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ಬರೆಸಿದ್ದು ಬರೆದ ಬರವಣಿಗೆ ಒಂದೇ ಆಗಿದೆ ಎಂದು ಕೇಳಲಾಗಿ ಶ್ರೀ ತನ್ವೀರ್ ಅಹಮದ್, ನೋಂದಣಿ ಸಂಖ್ಯೆ 85134 ರವರು ಬರೆದುಕೊಟ್ಟಿರುತ್ತಾರೆ. ನಾನು ಕುಳಿತಿದ್ದ ಡೆಸ್ಕಿನ ಬಲಬದಿಯ ಸಾಲಿನ ಮೂರನೇ ಡೆಸ್ಕಿನಲ್ಲಿ ಕುಳಿತಿದ್ದು ಅವರು ಮೊದಲೇ ಪರಿಚಯದವರಾಗಿದ್ದು ಪರೀಕ್ಷಾ ಕೊಠಡಿಗೆ ಆಗಮಿಸುವ ಮೊದಲೇ ಉತ್ತರಪತ್ರಿಕೆಗಳನ್ನು ಅದಲು ಬದಲು ಮಾಡಿಕೊಳ್ಳುವುದೆಂದು ಮಾತನಾಡಿಕೊಳ್ಳಲಾಗಿತ್ತು. ಅದರಂತೆ ಪರೀಕ್ಷಾ ಕೊಠಡಿಯಲ್ಲಿ ಸಂವೀಕ್ಷಕರು ಹಾಜರಾತಿ ಹಾಳೆಯಲ್ಲಿ ಸಹಿ ಪಡೆದ ನಂತರ ನಾನು ಅವರು ಕುಳಿತಿರುವ ಸೀಟಿನ ಪಕ್ಕ ಹೋಗಿ ನನ್ನ ಉತ್ತರ ಪತ್ರಿಕೆಯನ್ನು ಅವರಿಗೆ ನೀಡಿ ಅವರ ಉತ್ತರಪತ್ರಿಕೆಯನ್ನು ನನ್ನ ಬಳಿ ಇಟ್ಟುಕೊಂಡೆ ನಾನು ಅವರ ಉತ್ತರಪತ್ರಿಕೆಯಲ್ಲಿ ಏನು ಬರೆದಿರುವುದಿಲ್ಲ. ಸ್ವಲ್ಪ ಸಮಯದ ನಂತರ ಅವರಿಂದ ಉತ್ತರಗಳು ಬರೆದಾಗಿದೆಯೆಂದು ಸಿಗ್ನಲ್ ಬಂದ ನಂತರ ಅವರ ಸೀಟಿನ ಹತ್ತಿರ ಹೋಗಿ ಅವರ ಉತ್ತರಪತ್ರಿಕೆಯನ್ನು ಅವರಿಗೆ ನೀಡಿ ನನ್ನ ಉತ್ತರಪತ್ರಿಕೆಯನ್ನು ಅವರಿಂದ ಪಡೆದಿರುತ್ತೇನೆ ನಂತರ 12ನೇ ಪುಟದ ಉತ್ತರಗಳನ್ನು ನಾನೇ ಬರೆದಿರುತ್ತೇನೆ. ಪತ್ರಿಕೆ-2ರಲ್ಲಿ ವಿನಾಯಿತಿಯಿದ್ದರೂ ಸಹ ಪ್ರವೇಶ ಪತ್ರದಲ್ಲಿ ಎರಡು ಪತ್ರಿಕೆಯನ್ನು ನಮೂದಿಸಿದ್ದರಿಂದ ಹಾಜರಾಗಿ ನಾನೇ ಉತ್ತರಗಳನ್ನು ಬರೆದಿರುತ್ತೇನೆ. ಈ ರೀತಿ ನಾನು ಬೇರೆಯವರ ಕೈಯಿಂದ ಬರೆಸಿಕೊಂಡಿರುವುದು ತಪ್ಪು ಎಂದು ಒಪ್ಪಿಕೊಂಡಿರುತ್ತಾರೆ.

ಶ್ರೀ ಮೊಹಮ್ಮದ್ ಮಿಸಾಕ್ ಉರ್ ರೆಹಮಾನ್, ರವರು ದಿನಾಂಕ:25-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-1ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ:14-09-1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಮೊಹಮ್ಮದ್ ಮಿಸಾಕ್ ಉರ್‌ರೆಹಮಾನ್, ಪೊಲೀಸ್ ಕಾನ್ಸ್‌ಟೇಬಲ್ ನಂ. 317, ಗ್ರಾಮಾಂತರ ಪೊಲೀಸ್‌ಠಾಣೆ, ಗಂಗಾವತಿ, ಕೊಪ್ಪಳ, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಅಬ್ದುಲ್ ಶುಕೂರ್, ಹೆಡ್ ಕಾನ್ಸ್‌ಟೇಬಲ್, ಡಿ.ಜೆ.ಹಳ್ಳಿ, ಪೊಲೀಸ್ ಸ್ಟೇಷನ್, ಬೆಂಗಳೂರು ನಗರ ಈಸ್ಟ್, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀ ಅಬ್ದುಲ್ ಶುಕೂರ್, ನೋಂದಣಿ ಸಂಖ್ಯೆ 60008 ಇವರ ಅರ್ಜಿ ದಿನಾಂಕ 24-09-2005.
2. ಶ್ರೀ ಅಬ್ದುಲ್‌ಶುಕೂರ್ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ: ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಅಬ್ದುಲ್‌ಶುಕೂರ್ ಇವರ ದಿನಾಂಕ 25-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-2 ರ ಉತ್ತರಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ಅಬ್ದುಲ್ ಶುಕೂರ್, ಹೆಡ್ ಕಾನ್ಸ್‌ಟೇಬಲ್,

ಡಿ.ಜೆ.ಹಳ್ಳಿ, ಪೊಲೀಸ್ ಸ್ಟೇಷನ್, ಬೆಂಗಳೂರು ನಗರ ಈಸ್ಟ್, ನೋಂದಣಿ ಸಂಖ್ಯೆ 60008 ಇವರ ಉತ್ತರಪತ್ರಿಕೆಯಲ್ಲಿ ಹಸ್ತಾಕ್ಷರ ವಿಭಿನ್ನ ರೀತಿಯಲ್ಲಿ ಇದ್ದು ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಈ ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾಗಿರುವ ಕಾರಣ ದಿನಾಂಕ 25-04-2006ರಂದು ಬೆಳಿಗ್ಗೆ 10.30ಗಂಟೆಗೆ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದರ್ಶಿಯವರ ಮುಂದೆ ದಿನಾಂಕ:25-04-2006ರಲ್ಲಿ ಹಾಜರಾದ ಸಮಯದಲ್ಲಿ ನನಗೆ ಕನ್ನಡಭಾಷಾ ಉತ್ತರಪತ್ರಿಕೆಯ ಪ್ರತಿಗಳು ತೋರಿಸಿ ಅದರ ಕೆಲವು ಸಾಲುಗಳನ್ನು ಉತ್ತಲೇಖನ ಬರೆಸಿದ್ದು ಬರೆದ ಬರವಣಿಗೆಯು ಒಂದಕ್ಕೊಂದು ತಾಳೆಯಾಗುತ್ತದೆಯೇ ಎಂದು ಕೇಳಿರುತ್ತೀರಿ. ಅದಕ್ಕೆ ಕನ್ನಡಭಾಷೆಯ ತರ್ಜುಮೆಯನ್ನು ನಾನೇ ಬರೆದಿದ್ದು ಕನ್ನಡದಿಂದ ಆಂಗ್ಲ ಭಾಷೆಯ ತರ್ಜುಮೆಯು ತಾಳೆಯಾಗದಿರುವುದನ್ನು ನಾನು ಒಪ್ಪಿಕೊಂಡಿರುತ್ತೇನೆ. ಇದರ ಬಗ್ಗೆ ಸ್ಪಷ್ಟೀಕರಣ ಕೇಳಿರುತ್ತೀರಿ ಅದಕ್ಕೆ ನಾನು ನನ್ನ ಸೀಟಿನ ಮುಂದೆ ಕುಳಿತಿದ್ದ ಇನ್ನೊಬ್ಬ ಅಭ್ಯರ್ಥಿಯಿಂದ ಬರೆಸಿರುವುದಾಗಿ ಒಪ್ಪಿಕೊಂಡಿರುತ್ತಾರೆ.

ಶ್ರೀ ಅಬ್ದುಲ್ ಶುಕೂರ್, ರವರು ದಿನಾಂಕ: 25-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಮುಂದಿನಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಅಬ್ದುಲ್ ಶುಕೂರ್, ಹೆಡ್ ಕಾನ್ಸ್‌ಟೇಬಲ್, ಡಿ.ಜೆ.ಹಳ್ಳಿ, ಪೊಲೀಸ್ ಸ್ಟೇಷನ್, ಬೆಂಗಳೂರು ನಗರ ಈಸ್ಟ್, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ರಾಮಗೋವಿಂದ ನಾಯಕ್, ಫೈರ್‌ಮೆನ್, ಕರ್ನಾಟಕ ರಾಜ್ಯ ಅಗ್ನಿ ಶಾಮಕ ಠಾಣೆ, ಕಾರವಾರ. ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀ ರಾಮಗೋವಿಂದ ನಾಯಕ ನೋಂದಣಿ ಸಂಖ್ಯೆ 82138 ಇವರ ಅರ್ಜಿ ದಿನಾಂಕ 18-09-2005.
2. ಶ್ರೀ ರಾಮಗೋವಿಂದ ನಾಯಕ್ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ: ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ರಾಮಗೋವಿಂದ ನಾಯಕ್ ಇವರ ದಿನಾಂಕ 25-04-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-2ರ ಉತ್ತರಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ರಾಮಗೋವಿಂದ ನಾಯಕ್, ಫೈರ್‌ಮೆನ್, ಕರ್ನಾಟಕ ರಾಜ್ಯ ಅಗ್ನಿ ಶಾಮಕ ಠಾಣೆ, ಕಾರವಾರ. ನೋಂದಣಿ ಸಂಖ್ಯೆ: 82138 ಇವರ ಉತ್ತರಪತ್ರಿಕೆಯಲ್ಲಿ ಹಸ್ತಾಕ್ಷರ ವಿಭಿನ್ನ ರೀತಿಯಲ್ಲಿ ಇದ್ದು ಬೇರೆಯವರಿಂದ ಉತ್ತರ ಬರೆಸಿರುವುದು ಆಯೋಗದ ಗಮನಕ್ಕೆ ಬಂದಿರುತ್ತದೆ. ಈ ಅಭ್ಯರ್ಥಿಯು ಈ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರಿಗೆ ಮೇಲೆ (2)ರಲ್ಲಿ ಓದಲಾದ ಹಿಂಬರಹದಲ್ಲಿ ಅವರಿಂದ ಕೆಲವೊಂದು ಮಾಹಿತಿಯನ್ನು ಪಡೆಯಬೇಕಾಗಿರುವ ಕಾರಣ ದಿನಾಂಕ:25-04-2006ರಂದು ಬೆಳಿಗ್ಗೆ 10.30ಗಂಟೆಗೆ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗಲು ತಿಳಿಸಲಾಗಿತ್ತು. ಸದರಿಯವರು ಉಪಕಾರ್ಯದಶಿಯವರ ಮುಂದೆ ದಿನಾಂಕ: 25-04-2006ರಂದು ಹಾಜರಾದ ಸಮಯದಲ್ಲಿ ನನ್ನ ಉತ್ತರಪತ್ರಿಕೆಯಲ್ಲಿ ನಾನು ಬರೆದಿದ್ದ ಕನ್ನಡ ಮತ್ತು ಆಂಗ್ಲ ಎರಡು ಭಾಷೆಯ ಉತ್ತರಗಳ ಕೆಲವು ಸಾಲುಗಳನ್ನು ಉತ್ತಲೇಖನ ಹೇಳಿ ಬರೆಸಿದ್ದು ಬರವಣಿಗೆ ವ್ಯತ್ಯಾಸವಿದೆ ಎಂದು ಕೇಳಿರುತ್ತೀರಿ. ಆದರೆ ವೇಗವಾಗಿ ಬರೆಯುವಾಗ ಉಂಟಾಗಿದೆ ಎಂದು ಹೇಳಿರುತ್ತೇನೆ. ಆದರೆ ಆಂಗ್ಲ ಭಾಷೆಯಲ್ಲಿ ಉತ್ತರಗಳು ಒಂದಕ್ಕೊಂದು ತಾಳೆಯಾಗದೆ ವಿಭಿನ್ನ ರೀತಿಯಲ್ಲಿರುವುದು ಒಪ್ಪಿಕೊಂಡಿರುತ್ತೇನೆ. ಇದು ಹೇಗೆ ಎಂದು ಕೇಳಿರುವುದಕ್ಕೆ ನಾನು ಕನ್ನಡ ಭಾಷಾ ಪತ್ರಿಕೆ-2ರಲ್ಲಿ ಕನ್ನಡದಿಂದ ಇಂಗ್ಲೀಷ್ ಪ್ರಶ್ನೆಯ ಭಾಷಾಂತರವನ್ನು ನನ್ನ ಸೀಟಿನ ಬಲಬದಿಯಲ್ಲಿ ಕುಳಿತಿದ್ದ ಇನ್ನೊಬ್ಬ ಅಭ್ಯರ್ಥಿಯಿಂದ ಬರೆಸಿರುವುದಾಗಿ ಒಪ್ಪಿಕೊಂಡು ಆದರೆ ಅವರ ನೋಂದಣಿ ಸಂಖ್ಯೆ, ಅವರು ಯಾವ ಕಛೇರಿಯಲ್ಲಿ ಕೆಲಸಮಾಡುತ್ತಿರುವುದು ಎಂದು ತಿಳಿದಿಲ್ಲ. ನಾನು ಅವರಿಗೆ ಇಂಗ್ಲೀಷ್‌ನಿಂದ ಕನ್ನಡ ಅನುವಾದದ ಒಂದೆರಡು ಸಾಲುಗಳನ್ನು

ಹೇಳಿಕೊಟ್ಟಿರುತ್ತೇನೆ. ಆಗ ನೀವು ಮತ್ತೊಂದು ಉತ್ತರಪತ್ರಿಕೆ ತೋರಿಸಿ ಅದರಲ್ಲಿನ ಪ್ರಶ್ನೆ ಸಂಖ್ಯೆ-2ರ ಉತ್ತರದ ಬರವಣಿಗೆಯು ನನ್ನ ಉತ್ತರಪತ್ರಿಕೆಯಲ್ಲಿನ ಪ್ರಶ್ನೆ-2ರ ಉತ್ತರದ ಹಸ್ತಾಕ್ಷರಕ್ಕೆ ಹೋಲುತ್ತಿರುವುದು ನಿಜವಲ್ಲವೆಂದು ಕೇಳಿರುತ್ತೀರಿ. ನಿಜವೆಂದು ಒಪ್ಪಿಕೊಂಡಿರುತ್ತೇನೆ. ನಾನು ಅವರಿಗೆ ಪ್ರಶ್ನೆ-2ರ ಆಂಗ್ಲದಿಂದ ಕನ್ನಡಕ್ಕೆ ಅನುವಾದವನ್ನು ಬರೆದುಕೊಟ್ಟಿರುತ್ತೇನೆ ಮತ್ತು ಅವರು ನನಗೆ ಕನ್ನಡದಿಂದ ಆಂಗ್ಲ ಭಾಷೆಗೆ ತರ್ಜುಮೆ ಮಾಡಿ ಬರೆದು ಕೊಟ್ಟಿರುತ್ತಾರೆ. ಹೀಗೆ ಬರೆಯುವಾಗ ನನ್ನ ಉತ್ತರಪತ್ರಿಕೆ ಅವರ ಬಳಿ ಅವರ ಉತ್ತರಪತ್ರಿಕೆ ನನ್ನ ಬಳಿಯಲ್ಲಿದ್ದಿತು. ಆಂಗ್ಲ ಭಾಷೆಯಲ್ಲಿ ಪರಿಣತಿ ಇಲ್ಲದಿರುವ ಕಾರಣ ಈ ರೀತಿ ಮಾಡಿಸಿರುತ್ತೇನೆ. ಇದು ತಪ್ಪೆಂದು ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀ ರಾಮಗೋವಿಂದ ನಾಯಕ್, ರವರು ದಿನಾಂಕ: 25-04-2006ರಂದು ಅವರ ಹೇಳಿಕೆಯಲ್ಲಿ ಕನ್ನಡಭಾಷಾ ವಿಷಯದ ಪತ್ರಿಕೆ-2ರಲ್ಲಿ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ:14-09-1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ರಾಮಗೋವಿಂದ ನಾಯಕ್, ಫೈರ್ ಮೆನ್, ಕರ್ನಾಟಕ ರಾಜ್ಯ ಅಗ್ನಿ ಶಾಮಕ ಠಾಣೆ, ಕಾರವಾರ, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಬಿ.ಮಧುಸೂದನ್, ದಲಾಯತ್, ಪಿ.ಆರ್.ಎಲ್. ಸಿವಿಲ್ ಜಡ್ಜ್ (ಸೀನಿಯರ್ ಡಿವಿಜನ್) ಮತ್ತು ಸಿ.ಜೆ.ಎಂ. ಕೋರ್ಟ್, ಬಳ್ಳಾರಿ, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಶ್ರೀ ಬಿ.ಮಧುಸೂದನ್, ನೋಂದಣಿ ಸಂಖ್ಯೆ 67346 ಇವರ ಅರ್ಜಿ ದಿನಾಂಕ 21-09-2006.
2. ಶ್ರೀ ಬಿ. ಮಧುಸೂದನ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿ ಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಬಿ.ಮಧುಸೂದನ ಇವರ ಮನವಿ ಪತ್ರದ ದಿನಾಂಕ: 28-07-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-1 ಮತ್ತು 2ರ ಉತ್ತರಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ಬಿ. ಮಧುಸೂದನ್, ದಲಾಯತ್, ಪಿ.ಆರ್.ಎಲ್. ಸಿವಿಲ್ ಜಡ್ಜ್ (ಸೀನಿಯರ್ ಡಿವಿಜನ್) ಮತ್ತು ಸಿ.ಜೆ.ಎಂ. ಕೋರ್ಟ್, ಬಳ್ಳಾರಿ-583101, ಇವರ ನೋಂದಣಿ ಸಂಖ್ಯೆ 67346 ಇವರ ಕನ್ನಡಭಾಷಾ ಪತ್ರಿಕೆ-1 ಮತ್ತು 2ರ ಉತ್ತರಪತ್ರಿಕೆಯ ಆಂಗ್ಲ ಬರವಣಿಗೆಯ ನೋಂದಣಿ ಸಂಖ್ಯೆ 67210ರ ಅಭ್ಯರ್ಥಿಯ ಉತ್ತರಪತ್ರಿಕೆಯಲ್ಲಿನ ಬರವಣಿಗೆಗೆ ತಾಳೆಯಾಗುತ್ತದೆ. ಉತ್ತರಪತ್ರಿಕೆಗಳ ಒಂದೊಂದು ಪುಟಗಳನ್ನು ಬೇರೆಯವರಿಂದ ಬರೆಯಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿದೆ ಈ ಬಗ್ಗೆ ತಮ್ಮಿಂದ ಮಾಹಿತಿ ಪಡೆಯಲು ನಿಮಗೆ ದಿನಾಂಕ 15-04-2006 ರಂದು ಹಿಂಬರಹ ಜಾರಿ ಮಾಡಿ ದಿನಾಂಕ: 26-04-2006ರಂದು ಅಪರಾಹ್ನ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗುವಂತೆ ಸೂಚನೆ ನೀಡಲಾಗಿತ್ತು. ಆದರೆ ಸದರಿ ದಿನಾಂಕದಂದು ನೀವು ಉದ್ದೇಶಪೂರ್ವಕವಾಗಿ ಗೈರುಹಾಜರಾಗಿರುತ್ತೀರಿ.

ಸದರಿ ಪರೀಕ್ಷೆಗೆ ಹಾಜರಾಗುವ ಸಂಬಂಧ ನಿಮಗೆ ಜಾರಿಮಾಡಿರುವ ಪ್ರವೇಶಪತ್ರದ ಹಿಂಬದಿಯಲ್ಲಿ ಮುದ್ರಿಸಿರುವ ಅಭ್ಯರ್ಥಿಗಳಿಗೆ ಸೂಚನೆಗಳಲ್ಲಿ "ಪರೀಕ್ಷೆಯಲ್ಲಿ ನೆರವನ್ನು ನೀಡುವುದು ಅಥವಾ ತೆಗೆದುಕೊಳ್ಳುವುದು ನಕಲು ಮಾಡುವ ಉದ್ದೇಶದಿಂದ ಪ್ರಶ್ನೆಪತ್ರಿಕೆ, ಹೆಚ್ಚುವರಿ ಹಾಳೆಗಳನ್ನು ಒಬ್ಬರಿಂದ ಒಬ್ಬರಿಗೆ ಕಳುಹಿಸುವುದು ಈ ರೀತಿ ಮಾಡಿದವರಿಗೆ ಇಡೀ ಪರೀಕ್ಷೆಗೆ ಅವರ ಅಭ್ಯರ್ಥಿತ್ವವನ್ನು ರದ್ದುಗೊಳಿಸುವುದು ಮತ್ತು ಅವನನ್ನು/ಅವಳನ್ನು ನಾಲ್ಕು ಹೆಚ್ಚಿನ ಪರೀಕ್ಷೆಗಳವರೆಗೆ ವಿಸ್ತರಿಸುವ ಮತ್ತಷ್ಟು ಅವಕಾಶಗಳಿಂದ ಡಿಬಾರ್ ಮಾಡುವ ದಂಡನೆಯನ್ನು ವಿಧಿಸಲಾಗುವುದೆಂದು" ಸ್ಪಷ್ಟವಾಗಿ ತಿಳಿಸಿದೆ. ಇದನ್ನು ತಿಳಿದು ಸಹ ನೀವು ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿ ಮೇಲೆ ತಿಳಿಸಿರುವಂತೆ ಪರೀಕ್ಷಾ ದುರಾಚಾರಗಳಲ್ಲಿ ತೊಡಗಿರುತ್ತೀರಿ. ಈ ಹಿನ್ನೆಲೆಯಲ್ಲಿ 1965ರ ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 14ನೇ ನಿಯಮದ 14ನೇ ಉಪಬಂಧಗಳ ಅಡಿಯಲ್ಲಿ ಆಯೋಗವು ನಿಮ್ಮ ವಿರುದ್ಧ ಕ್ರಮ ಕೈಗೊಂಡು ಸದರಿ ಅಧಿವೇಶನದ ಇಡೀ ಪರೀಕ್ಷೆಗೆ ನಿಮ್ಮ ಅಭ್ಯರ್ಥಿತ್ವವನ್ನು ರದ್ದುಗೊಳಿಸಿ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳನ್ನು ತೆಗೆದುಕೊಳ್ಳದಂತೆ ಡಿಬಾರ್ ಮಾಡುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬುದಕ್ಕೆ 10

ದಿವಸದೊಳಗಾಗಿ ಲಿಖಿತ ಸಮಜಾಯಿಷಿಯನ್ನು ಕಾರ್ಯದರ್ಶಿ ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560001,ಇವರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ತಪ್ಪಿದ್ದಲ್ಲಿ ಈ ಬಗ್ಗೆ ನೀವು ಹೇಳುವುದು ಏನು ಇಲ್ಲವೆಂದು ಏಕಪಕ್ಷೀಯವಾಗಿ ದಂಡನೆ ವಿಧಿಸಲಾಗುವುದೆಂದು ಸೂಚಿಸಲಾಗಿತ್ತು.

ಮುಂದುವರಿದಂತೆ, ದಿನಾಂಕ 18-07-2006ರಲ್ಲಿ ಕಾರಣ ಕೇಳುವ ನೋಟೀಸಿಗೆ ಶ್ರೀ ಮಧುಸೂದನ್ .ಬಿ ರವರು ಉತ್ತರಿಸುತ್ತಾ ಅವರು ದಿನಾಂಕ 26-04-2006ರಂದು ಕಛೇರಿಗೆ ಭೇಟಿ ಮಾಡಲು ಬರುವುದಕ್ಕಾಗಿ ರಜಾ ಹಾಕಿದ್ದು, ಆದರೆ ನನ್ನ ತಂಗಿ ಗಂಡನಿಗೆ ಅನಾರೋಗ್ಯದ ನಿಮಿತ್ತ ಅವರನ್ನು ನೋಡಲು ಹೋಗಬೇಕಾಗಿತ್ತು. ಕಛೇರಿ ಭೇಟಿ ಮಾಡಲು ಆಗಲಿಲ್ಲ ಇದೇ ಮೊದಲ ಭಾರಿ ಪರೀಕ್ಷೆ ತೆಗೆದುಕೊಂಡಿದ್ದು, ನಿಯಮ ನಿಬಂಧನೆಗಳನ್ನು ಸರಿಯಾಗಿ ಓದಿಕೊಂಡಿರಲ್ಲಿಲ್ಲ. ನನ್ನಿಂದ ತಪ್ಪಾಗಿದೆ, ಈ ಮಾಡಿದ ತಪ್ಪನ್ನು ಮನ್ನಿಸಬೇಕೆಂದು ತಪ್ಪೊಪ್ಪಿಕೊಂಡಿದ್ದಾರೆ.

ಶ್ರೀ ಬಿ. ಮಧುಸೂದನ್, ರವರು ದಿನಾಂಕ: 28-07-2006ರಂದು ಅವರ ಪತ್ರದಲ್ಲಿ ಅವರ ಹೇಳಿಕೆಯಲ್ಲಿನಂತೆ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ:14-09-1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಬಿ. ಮಧುಸೂದನ್, ದಲಾಯತ್, ಪ್ರಿನ್ಸಿಪಾಲ್ ಸಿವಿಲ್ ಜಡ್ಜ್ (ಸೀನಿಯರ್ ಡಿವಿಜನ್) ಮತ್ತು ಸಿ.ಜೆ.ಎಂ. ಕೋರ್ಟ್, ಬಳ್ಳಾರಿ-583101, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಅರೀಫ್ ಅಹಮದ್ ಷರೀಫ್, ಪೊಲೀಸ್ ಪೇದೆ. ನಂ. 2986, ' ಸಿ' ಕಂಪನಿ, ಸಿಎಆರ್ ಹೆಡ್ ಕ್ವಾಟ್ರರ್ಸ್, ಮೈಸೂರು ರಸ್ತೆ, ಬೆಂಗಳೂರು, ಇವರು ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀ ಅರೀಫ್ ಅಹಮದ್ ಷರೀಫ್, ನೋಂದಣಿ ಸಂಖ್ಯೆ 60064 ಇವರ ಅರ್ಜಿ ದಿನಾಂಕ 23-09-2005.
2. ಶ್ರೀ ಅರೀಫ್ ಅಹಮದ್ ಷರೀಫ್ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಅರೀಫ್ ಅಹಮದ್ ಷರೀಫ್ ಇವರ ಮನವಿ ಪತ್ರ ದಿನಾಂಕ 12-06-2006ರ ಹೇಳಿಕೆ.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡಭಾಷಾ ಪರೀಕ್ಷೆಯ ಪತ್ರಿಕೆ-2 ರ ಉತ್ತರಪತ್ರಿಕೆಯ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀ ಅರೀಫ್ ಅಹಮದ್ ಷರೀಫ್, ಪೊಲೀಸ್ ಪೇದೆ. ನಂ. 2986, ' ಸಿ' ಕಂಪನಿ, ಸಿಎಆರ್ ಹೆಡ್ ಕ್ವಾಟ್ರರ್ಸ್, ಮೈಸೂರು ರಸ್ತೆ, ಬೆಂಗಳೂರು-560018, ಇವರ ನೋಂದಣಿ ಸಂಖ್ಯೆ 60064, ಇವರ ಕನ್ನಡಭಾಷಾ ಪತ್ರಿಕೆ-1 ಮತ್ತು-2ರ ಅಭ್ಯರ್ಥಿಯ ಉತ್ತರಪತ್ರಿಕೆಗಳ ಒಂದೊಂದು ಪುಟಗಳನ್ನು ಬೇರೆಯವರಿಂದ ಬರೆಯಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿದೆ. ಈ ಬಗ್ಗೆ ತಮ್ಮಿಂದ ಮಾಹಿತಿ ಪಡೆಯಲು ನಿಮಗೆ ದಿನಾಂಕ:15-04-2006 ರಂದು ಹಿಂಬರಹ ಜಾರಿ ಮಾಡಿ ದಿನಾಂಕ:24-04-2006 ಅಪರಾಹ್ನ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗುವಂತೆ ಸೂಚನೆ ನೀಡಲಾಗಿತ್ತು. ಆದರೆ ಸದರಿ ದಿನಾಂಕದಂದು ನೀವು ಉದ್ದೇಶಪೂರ್ವಕವಾಗಿ ಗೈರುಹಾಜರಾಗಿರುತ್ತೀರಿ.

ಸದರಿ ಪರೀಕ್ಷೆಗೆ ಹಾಜರಾಗುವ ಸಂಬಂಧ ನಿಮಗೆ ಜಾರಿಮಾಡಿರುವ ಪ್ರವೇಶಪತ್ರದ ಹಿಂಬದಿಯಲ್ಲಿ ಮುದ್ರಿಸಿರುವ ಅಭ್ಯರ್ಥಿಗಳಿಗೆ ಸೂಚನೆಗಳಲ್ಲಿ "ಪರೀಕ್ಷೆಯಲ್ಲಿ ನೆರವನ್ನು ನೀಡುವುದು ಅಥವಾ ತೆಗೆದುಕೊಳ್ಳುವುದು ನಕಲು ಮಾಡುವ ಉದ್ದೇಶದಿಂದ ಪ್ರಶ್ನೆಪತ್ರಿಕೆ, ಹೆಚ್ಚುವರಿ ಹಾಳೆಗಳನ್ನು ಒಬ್ಬರಿಂದ ಒಬ್ಬರಿಗೆ ಕಳುಹಿಸುವುದು ಈ ರೀತಿ ಮಾಡಿದವರಿಗೆ ಇಡೀ ಪರೀಕ್ಷೆಗೆ ಅವರ ಅಭ್ಯರ್ಥಿತ್ವವನ್ನು ರದ್ದುಗೊಳಿಸುವುದು ಮತ್ತು ಅವನನ್ನು/ಅವಳನ್ನು ನಾಲ್ಕು ಹೆಚ್ಚಿನ ಪರೀಕ್ಷೆಗಳವರೆಗೆ ವಿಸ್ತರಿಸುವ ಮತ್ತಷ್ಟು ಅವಕಾಶಗಳಿಂದ ಡಿಬಾರ್ ಮಾಡುವ ದಂಡನೆಯನ್ನು ವಿಧಿಸಲಾಗುವುದೆಂದು" ಸ್ಪಷ್ಟವಾಗಿ ತಿಳಿಸಿದೆ. ಇದನ್ನು ತಿಳಿದು ಸಹ ನೀವು ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿ ಮೇಲೆ ತಿಳಿಸಿರುವಂತೆ ಪರೀಕ್ಷಾ ದುರಾಚಾರಗಳಲ್ಲಿ ತೊಡಗಿರುತ್ತೀರಿ. ಈ ಹಿನ್ನೆಲೆಯಲ್ಲಿ ಆಯೋಗವು 1965ರ ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 14ನೇ ನಿಯಮದ 14ನೇ ಉಪಬಂಧಗಳ ಅಡಿಯಲ್ಲಿ ನಿಮ್ಮ ವಿರುದ್ಧ ಕ್ರಮ ಕೈಗೊಂಡು ಸದರಿ

ಅಧಿವೇಶನದ ಇಡೀ ಪರೀಕ್ಷೆಗೆ ನಿಮ್ಮ ಅಭ್ಯರ್ಥಿತ್ವವನ್ನು ರದ್ದುಗೊಳಿಸಿ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳನ್ನು ತೆಗೆದುಕೊಳ್ಳದಂತೆ ಡಿಬಾರ್ ಮಾಡುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬುದಕ್ಕೆ 10 ದಿವಸದೊಳಗಾಗಿ ಲಿಖಿತ ಸಮಜಾಯಿಷಿಯನ್ನು ಕಾರ್ಯದರ್ಶಿ ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-01, ಇವರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ತಪ್ಪಿದ್ದಲ್ಲಿ ಈ ಬಗ್ಗೆ ನೀವು ಹೇಳುವುದು ಏನು ಇಲ್ಲವೆಂದು ಏಕಪಕ್ಷೀಯವಾಗಿ ವಿಧಿಸಲಾಗುವುದೆಂದು ದಿನಾಂಕ: 26-05-2006ರ ನೋಟಿಸಿನಲ್ಲಿ ತಿಳಿಸಲಾಗಿತ್ತು.

ಮುಂದುವರಿದಂತೆ, ದಿನಾಂಕ 26-05-2006ರ ಕಾರಣಕೇಳುವ ನೋಟಿಸಿಗೆ ಶ್ರೀ ಅರೀಫ್ ಅಹಮದ್ ಷರೀಫ್, ರವರು ದಿನಾಂಕ 12-06-2006 ಪತ್ರದಲ್ಲಿ ಸದರಿ ಪರೀಕ್ಷೆ ಬರೆಯುವಾಗ ಪತ್ರಿಕೆ-2ನ್ನು ಕನ್ನಡ ಭಾಷೆಯಿಂದ ಆಂಗ್ಲ ಭಾಷೆಗೆ ತರ್ಜುಮೆ ಮಾಡಿ ಮತ್ತು ಆಂಗ್ಲ ಭಾಷೆಯಿಂದ ಕನ್ನಡ ಭಾಷೆಗೆ ತರ್ಜುಮೆ ಮಾಡಿದ್ದು, ಪಕ್ಕದಲ್ಲಿ ಕುಳಿತ ಅವನ ಸ್ನೇಹಿತನು ಉತ್ತರಪತ್ರಿಕೆಯನ್ನು ನೋಡಿ ಅದು ತಪ್ಪಾಗಿ ಬರೆದಿದ್ದಿಯಾ ಎಂದು ಹೇಳಿ ಉತ್ತರವನ್ನು ಹೊಡೆದುಹಾಕಿ ಬೇರೆ ಉತ್ತರಬರೆದುಕೊಟ್ಟಿರುತ್ತಾನೆ ಮತ್ತು ನನ್ನ ವರ್ಗಾವಣೆಯಾಗಿದ್ದರಿಂದ ದಿನಾಂಕ 24-04-2006ರ ಪತ್ರ ತಲುಪಿರಲ್ಲಿಲ್ಲ ಮೇಲೆ ಹೇಳಿದಂತೆ ತಪ್ಪಾಗಿರುವುದನ್ನು ಮನ್ನಿಸಬೇಕೆಂದು ತಪ್ಪೊಪ್ಪಿಕೊಂಡಿರುತ್ತಾರೆ.

ಶ್ರೀ ಅರೀಫ್ ಅಹಮದ್ ಷರೀಫ್, ರವರು ದಿನಾಂಕ: 12-06-2006ರಂದು ಅವರ ಪತ್ರದಲ್ಲಿ ಅವರ ಹೇಳಿಕೆಯಲ್ಲಿನಂತೆ ದುರಾಚಾರವೆಸಗಿರುವುದಾಗಿ ತಪ್ಪೊಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರ ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಅರೀಫ್ ಅಹಮದ್ ಷರೀಫ್, ಪೊಲೀಸ್ ಪೇದೆ. ನಂ. 2986, 'ಸಿ' ಕಂಪನಿ, ಸಿಎಆರ್ ಹೆಡ್ ಕ್ವಾಟ್ರರ್ಸ್, ಮೈಸೂರು ರಸ್ತೆ, ಬೆಂಗಳೂರು-560018, ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ದ್ವಾರಕಾನಾಥ್ ಸಿ.(ನೋಂದಣಿ ಸಂಖ್ಯೆ 60280) ಪೊಲೀಸ್ ಪೇದೆ, ಡಿಸಿಪಿ ಸಿಎಆರ್ ಸೌತ್,ಅಡುಗೋಡಿ, ಬೆಂಗಳೂರು ಇವರು ಕನ್ನಡ ಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀ ಸಿ.ದ್ವಾರಕಾನಾಥ, ನೋಂದಣಿ ಸಂಖ್ಯೆ 60280 ಇವರ ಅರ್ಜಿ ದಿನಾಂಕ 21-09-2005.
2. ಶ್ರೀ ಸಿ.ದ್ವಾರಕಾನಾಥ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006-07/ಪಿಎಸ್‌ಸಿ ದಿನಾಂಕ 15-04-2006.
3. ಶ್ರೀ ಸಿ.ದ್ವಾರಕಾನಾಥ್ ಇವರಿಗೆ ಕಾರಣಕೇಳುವ ನೋಟಿಸು ಸಂಖ್ಯೆ:19/06-07/ಪಿಎಸ್‌ಸಿ ಜಾರಿಮಾಡಿದ ದಿನಾಂಕ 26-05-2006.

**ಪ್ರಸ್ತಾವನೆ:**

2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯನ್ನು ತೆಗೆದುಕೊಂಡಿದ್ದು, ಶ್ರೀ ಸಿ.ದ್ವಾರಕಾನಾಥ್, ಪೊಲೀಸ್ ಪೇದೆ, ಡಿಸಿಪಿ ಸಿಎಆರ್ ಸೌತ್ ಆಡುಗೋಡಿ, ಬೆಂಗಳೂರು (ನೋಂದಣಿ ಸಂಖ್ಯೆ 60280) ಇವರು ಕನ್ನಡಭಾಷಾ ಪತ್ರಿಕೆ-1 ಮತ್ತು 2ರ ಉತ್ತರಪತ್ರಿಕೆಯ ಬರವಣಿಗೆ ಪಕ್ಕದವರ ನೋಂದಣಿ ಸಂಖ್ಯೆ 60281ರ ಅಭ್ಯರ್ಥಿಯು ಕನ್ನಡಭಾಷಾ ಪತ್ರಿಕೆಯ ಉತ್ತರಪತ್ರಿಕೆಯಲ್ಲಿ ಬರವಣಿಗೆ ತಾಳೆಯಾಗುವುದು ಕಂಡುಬಂದಿದ್ದು, ಅವರಿಬ್ಬರ ಪತ್ರಿಕೆ-2ರ ಕನ್ನಡಭಾಷಾಂತರ ಉತ್ತರವನ್ನು ನೀವೇ ಬರೆದುಕೊಟ್ಟಿರುವುದಾಗಿ ಮೇಲ್ನೋಟಕ್ಕೆ ಸಾಬೀತಾಗಿದೆ. ಈ ಬಗ್ಗೆ ಅವರಿಂದ ಮಾಹಿತಿ ಪಡೆಯಲು ದಿನಾಂಕ:15-04-2006ರಂದು ಹಿಂಬರಹ ಜಾರಿಮಾಡಿ ದಿನಾಂಕ:26-04-2006ರಂದು ಬೆಳಿಗ್ಗೆ 10.30ಗಂಟೆಗೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗುವಂತೆ ಸೂಚನೆ ನೀಡಲಾಗಿತ್ತು. ಆದರೆ ನೀವು ಉದ್ದೇಶಪೂರ್ವಕವಾಗಿ ಗೈರು ಹಾಜರಾಗಿರುತ್ತೀರಿ.

ಸದರಿ ಪರೀಕ್ಷೆಯ ಸಂಬಂಧ ಇವರಿಗೆ ಜಾರಿಮಾಡಿರುವ ಪ್ರವೇಶಪತ್ರದ ಹಿಂಬದಿಯಲ್ಲಿ ಮುದ್ರಿಸಿರುವ ಅಭ್ಯರ್ಥಿಗಳಿಗೆ ಸೂಚನೆಗಳಲ್ಲಿ ''ಪರೀಕ್ಷೆಯಲ್ಲಿ ನೆರವನ್ನು ನೀಡುವುದು ಅಥವಾ ತೆಗೆದುಕೊಳ್ಳುವುದು ನಕಲು ಮಾಡುವ ಉದ್ದೇಶದಿಂದ ಪ್ರಶ್ನೆಪತ್ರಿಕೆ ಹೆಚ್ಚುವರಿ ಹಾಳೆಗಳನ್ನು ಒಬ್ಬರಿಂದ ಒಬ್ಬರಿಗೆ ಕಳುಹಿಸುವುದು, ಈ ರೀತಿ ಮಾಡಿದಲ್ಲಿ ಇಡೀ ಪರೀಕ್ಷೆಗೆ ಅವರ ಅಭ್ಯರ್ಥಿತ್ವವನ್ನು ರದ್ದುಗೊಳಿಸುವುದು ಮತ್ತು ಅವನನ್ನು/ಅವಳನ್ನು ನಾಲ್ಕು ಹೆಚ್ಚಿನ ಪರೀಕ್ಷೆಗಳವರೆಗೆ ವಿಸ್ತರಿಸುವ ಮತ್ತಷ್ಟು ಅವಕಾಶಗಳಿಂದ ಡಿಬಾರ್ ಮಾಡುವ ದಂಡನೆ ವಿಧಿಸಲಾಗುವುದೆಂದು ''ಸ್ಪಷ್ಟವಾಗಿ ತಿಳಿಸಲಾಗಿದೆ ಇದನ್ನು ತಿಳಿದು ಸಹ

ಇವರು ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿ ಮೇಲೆ ತಿಳಿಸಿರುವಂತೆ ಪರೀಕ್ಷಾ ದುರಾಚಾರದಲ್ಲಿ ತೊಡಗಿರುತ್ತಾರೆ. ಸದರಿ ಅಭ್ಯರ್ಥಿಗೆ ಮೇಲೆ (3)ರಲ್ಲಿ ಓದಲಾದ ಕಾರಣಕೇಳುವ ನೋಟೀಸನ್ನು ಜಾರಿ ಮಾಡಿ ಅದರಲ್ಲಿ ತಿಳಿಸಿರುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಗಿತ್ತು. ಶ್ರೀ ಸಿ.ದ್ವಾರಕಾನಾಥ್, ಇವರು ಕಾರಣ ಕೇಳುವ ನೋಟಿಸನ್ನು ಸ್ವೀಕರಿಸಿದ್ದರೂ ಸಹ ಯಾವುದೇ ಹೇಳಿಕೆ ಸಲ್ಲಿಸಿಲ್ಲವಾದ್ದರಿಂದ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ ಅವುಗಳ ಆಧಾರದ ಮೇಲೆ ಆಯೋಗ ಈ ಮುಂದಿನಂತೆ ಅದೇಶ ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282–1300/2006–07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93–94/ಪಿಎಸ್‌ಸಿ ದಿನಾಂಕ:14–09–1993 ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ದ್ವಾರಕಾನಾಥ್ ಸಿ. ಪೊಲೀಸ್ ಪೇದೆ, ಡಿಸಿಪಿ ಸಿಎಆರ್ ಸೌತ್, ಆಡುಗೋಡಿ, ಬೆಂಗಳೂರು ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ವಿಠ್ಠಲ್ ಹನಮಂತ ಹೂಗಾರ್, ಪಿಸಿ–450 ಇಕಾಯ್ 10ನೇ ಬೆಟಾಲಿಯನ್, ಕೆಎಸ್‌ಆರ್‌ಪಿ, ಶಿಗ್ಗಾವಿ, ಹಾವೇರಿ ಜಿಲ್ಲೆ ಮತ್ತು ಶ್ರೀ ಜಾಕೀರ್ ಹುಸೇನ್ ಅಬ್ದುಲ್ ಹಫೀಜಾ ಮುಲ್ಲಾ, ಪೊಲೀಸ್‌ಪೇದೆ. ನಂ. 219,'ಬಿ' ಕಾಯ್ 10ನೇ ಬೆಟಾಲಿಯನ್, ಕೆಎಸ್‌ಆರ್‌ಪಿ, ಶಿಗ್ಗಾವಿ, ಹಾವೇರಿ ಜಿಲ್ಲೆ ಇವರುಗಳ ಕನ್ನಡಭಾಷಾ ವಿಷಯದ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಶ್ರೀ ವಿಠ್ಠಲ್ ಹನಮಂತ ಹೂಗಾರ್, ನೋಂದಣಿ ಸಂಖ್ಯೆ 81152 ಶ್ರೀ ಜಾಕೀರ್ ಹುಸೇನ್ ಅಬ್ದುಲ್ ಹಫೀಜಾ ಮುಲ್ಲಾ ನೋಂದಣಿ ಸಂಖ್ಯೆ 81154 ಇವರ ಅರ್ಜಿ ದಿನಾಂಕ 15–09–2005 ಮತ್ತು 12–09–2005.
2. ಶ್ರೀ ವಿಠ್ಠಲ್ ಹನಮಂತ ಹೂಗಾರ್, ಮತ್ತು ಶ್ರೀ ಜಾಕೀರ್ ಹುಸೇನ್ ಅಬ್ದುಲ್ ಹಫೀಜಾಮುಲ್ಲಾ ಇವರಿಗೆ ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಲು ಜಾರಿಮಾಡಿದ ಹಿಂಬರಹದ ಸಂಖ್ಯೆ ಆರ್‌ಹೆಚ್‌ಎಸ್ 01/2006–07/ಪಿಎಸ್‌ಸಿ ದಿನಾಂಕ 15–04–2006.
3. ಶ್ರೀ ವಿಠ್ಠಲ್ ಹನಮಂತ ಹೂಗಾರ್, ಮತ್ತು ಶ್ರೀ ಜಾಕೀರ್ ಹುಸೇನ್ ಅಬ್ದುಲ್ ಹಫೀಜಾ ಮುಲ್ಲಾ ಇವರುಗಳಿಗೆ ಕಾರಣಕೇಳುವ ನೋಟೀಸು ಸಂಖ್ಯೆ:19/06–07/ಪಿಎಸ್‌ಸಿ ದಿನಾಂಕ: 26–05–2006.

**ಪ್ರಸ್ತಾವನೆ:**

ಶ್ರೀ ವಿಠ್ಠಲ್ ಹನಮಂತ ಹೂಗಾರ್ ಮತ್ತು ಶ್ರೀ ಜಾಕೀರ್ ಹುಸೇನ್ ಅಬ್ಬುಲ್ ಹಫೀಜ್ ಮುಲ್ಲಾ ರವರುಗಳು 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡ ಭಾಷಾ ವಿಷಯದ ಪರೀಕ್ಷೆಯನ್ನು ತೆಗೆದುಕೊಂಡಿದ್ದು, ಅವರುಗಳ ಪತ್ರಿಕೆ–1 ಮತ್ತು 2ರಲ್ಲಿರುವ ಬರವಣಿಗೆಯು ಒಂದೇ ರೀತಿಯಾಗಿ ಕಂಡು ಬರುತ್ತಿದ್ದು ಅಲ್ಲದೇ ಉತ್ತರಪತ್ರಿಕೆಯ ಮುಖ ಪುಟದಲ್ಲಿ ನಮೂದಿಸಿರುವ ಬರವಣಿಗೆಗೂ ಒಳಪುಟದಲ್ಲಿರುವ ಉತ್ತರದಲ್ಲಿನ ಬರವಣಿಗೆಗೂ ಅಜಗಜಾಂತರ ವ್ಯತ್ಯಾಸ ಕಂಡು ಬರುತ್ತದೆ. ಈ ಕಾರಣದಿಂದ ಅವರುಗಳು ಸದರಿ ಪರೀಕ್ಷೆಯ ಉತ್ತರಗಳನ್ನು ಬೇರೆಯವರಿಂದ ಬರೆಸಿರುವುದು ಮೇಲ್ನೋಟಕ್ಕೆ ಸಾಬೀತಾಗಿದೆ. ಈ ಬಗ್ಗೆ ಅವರಿಂದ ಮಾಹಿತಿ ಪಡೆಯಲು ಅವರಿಬ್ಬರಿಗೂ ದಿನಾಂಕ:15–04–2006 ರಂದು ಹಿಂಬರಹ ಜಾರಿಮಾಡಿ ಕ್ರಮವಾಗಿ ದಿನಾಂಕ:25–04–2006ರಂದು ಬೆಳಿಗ್ಗೆ 10.30ಕ್ಕೆ ಆಯೋಗದ ಉಪಕಾರ್ಯದರ್ಶಿಯವರ ಮುಂದೆ ಹಾಜರಾಗುವಂತೆ ಸೂಚನೆ ನೀಡಲಾಗಿತ್ತು. ಆದರೆ ಸದರಿ ದಿನಾಂಕಗಳಂದು ಅಭ್ಯರ್ಥಿಗಳಿಬ್ಬರೂ ಉದ್ದೇಶಪೂರ್ವಕವಾಗಿ ಗೈರುಹಾಜರಾಗಿರುತ್ತಾರೆ ಎಂದು ಕಂಡುಬಂದಿರುತ್ತದೆ.

ಸದರಿ ಪರೀಕ್ಷೆಯ ಸಂಬಂಧ ಅವರುಗಳಿಗೆ ಜಾರಿಮಾಡಿರುವ ಪ್ರವೇಶಪತ್ರದ ಹಿಂಬದಿಯಲ್ಲಿ ಮುದ್ರಿಸಿರುವ ಅಭ್ಯರ್ಥಿಗಳಿಗೆ ಸೂಚನೆಗಳಲ್ಲಿ "ಪರೀಕ್ಷೆಯಲ್ಲಿ ನೆರವನ್ನು ನೀಡುವುದು ಅಥವಾ ತೆಗೆದುಕೊಳ್ಳುವುದು ನಕಲು ಮಾಡುವ ಉದ್ದೇಶದಿಂದ ಪ್ರಶ್ನೆಪತ್ರಿಕೆ ಹೆಚ್ಚುವರಿ ಹಾಳೆಗಳನ್ನು ಒಬ್ಬರಿಂದ ಒಬ್ಬರಿಗೆ ಕಳುಹಿಸುವುದು. ಈ ರೀತಿ ಮಾಡಿದಲ್ಲಿ ಇಡೀ ಪರೀಕ್ಷೆಗೆ ಅವರ ಅಭ್ಯರ್ಥಿತ್ವವನ್ನು ರದ್ದುಗೊಳಿಸುವುದು ಮತ್ತು ಅವನನ್ನು/ಅವಳನ್ನು ನಾಲ್ಕು ಹೆಚ್ಚಿನ ಪರೀಕ್ಷೆಗಳವರೆಗೆ ವಿಸ್ತರಿಸುವ ಮತ್ತಷ್ಟು ಅವಕಾಶಗಳಿಂದ ಡಿಬಾರ್ ಮಾಡುವ ದಂಡನೆ ವಿಧಿಸಲಾಗುವುದೆಂದು "ಸ್ಪಷ್ಟವಾಗಿ ತಿಳಿಸಲಾಗಿದೆ ಇದನ್ನು ತಿಳಿದು ಸಹ ಅವರುಗಳು ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿ ಮೇಲೆ ತಿಳಿಸಿರುವಂತೆ ಪರೀಕ್ಷಾ ದುರಾಚಾರದಲ್ಲಿ ತೊಡಗಿರುತ್ತಾರೆ. ಸದರಿ ಅಭ್ಯರ್ಥಿಗಳಿಗೆ ಮೇಲೆ (3)ರಲ್ಲಿ ಓದಲಾದ ಕಾರಣಕೇಳುವ ನೋಟೀಸನ್ನು ಜಾರಿ ಮಾಡಿ ಅದರಲ್ಲಿ ತಿಳಿಸಿರುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಗಿತ್ತು. ಶ್ರೀ ವಿಠ್ಠಲ್ ಹನಮಂತ ಹೂಗಾರ್, ಹಾಗೂ ಶ್ರೀ ಜಾಕೀರ್ ಹುಸೇನ್ ಅಬ್ದುಲ್ ಹಫೀಜಾ ಮುಲ್ಲಾ ಇವರುಗಳು ಕಾರಣ ಕೇಳುವ ನೋಟಿಸನ್ನು ಸ್ವೀಕರಿಸಿದ್ದರೂ ಸಹ ಯಾವುದೇ ಹೇಳಿಕೆ ಸಲ್ಲಿಸಿಲ್ಲವಾದ್ದರಿಂದ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ ಅವುಗಳ ಆಧಾರದ ಮೇಲೆ ಆಯೋಗ ಈ ಕೆಳಕಂಡಂತೆ ಅದೇಶ ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1282-1300/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ 14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ವಿಠ್ಠಲ್ ಹನಮಂತ ಹೂಗಾರ್, ಪಿಸಿ 450 "ಇ" ಕಾಯ್ 10ನೇ ಬೆಟಾಲಿಯನ್, ಕೆಎಸ್‌ಆರ್‌ಪಿ, ಶಿಗ್ಗಾವಿ, ಹಾವೇರಿ ಜಿಲ್ಲೆ ಮತ್ತು ಶ್ರೀ ಜಾಕೀರ್ ಹುಸೇನ್ ಅಬ್ದುಲ್ ಹಫೀಜಾ ಮುಲ್ಲಾ, ಪೊಲೀಸ್ ಪೇದೆ. ನಂ. 219,'ಬಿ' ಕಾಯ್ 10ನೇ ಬೆಟಾಲಿಯನ್ ಕೆಎಸ್‌ಆರ್‌ಪಿ, ಶಿಗ್ಗಾವಿ, ಹಾವೇರಿ ಜಿಲ್ಲೆ ಇವರಿಗೆ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ವೀರಭದ್ರಪ್ಪ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢ ಶಾಲೆ ವಿಭಾಗ), ಹಟ್ಟಿ ಗೋಲ್ಡ್‌ಮೈನ್ಸ್, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರು ಎಸಗಿದ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. ಶ್ರೀ ವೀರಭದ್ರಪ್ಪ, ಇವರು 2006ನೇ ಸಾಲಿನ ಪ್ರಥಮ ಆಧಿವೇಶನದ ಇಲಾಖಾ ಪರೀಕ್ಷೆಗೆ ಸಲ್ಲಿಸಿದ ಅರ್ಜಿ ದಿನಾಂಕ: 24-03-2006.
2. ಶ್ರೀ ವೀರಭದ್ರಪ್ಪ, ಇವರಿಗೆ ಜಾರಿ ಮಾಡಿದ ಹಿಂಬರಹ ಪತ್ರ ಸಂಖ್ಯೆ: ಆರ್‌ಹೆಚ್‌ಎಸ್ 47/2005-06/ಪಿಎಸ್‌ಸಿ ದಿನಾಂಕ: 01-08-2006.
3. ಶ್ರೀ ವೀರಭದ್ರಪ್ಪ, ರವರ ಹೇಳಿಕೆ ದಿನಾಂಕ 17-08-2006.

**ಪ್ರಸ್ತಾವನೆ:**

2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಕೌಂಟ್ಸ್ ಹೈಯರ್ ವಿಷಯದ ಪರೀಕ್ಷೆಗೆ ಅರ್ಜಿ ಸಲ್ಲಿಸಿದ್ದ ಶ್ರೀ ವೀರಭದ್ರಪ್ಪ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢ ಶಾಲೆ ವಿಭಾಗ), ಹಟ್ಟಿ ಗೋಲ್ಡ್ ಮೈನ್ಸ್, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ-584115, ಇವರು ಅಕೌಂಟ್ಸ್ ಹೈಯರ್ ಪರೀಕ್ಷೆಗೆ ಹಾಜರಾಗಲು ನೋಂದಣಿ ಸಂಖ್ಯೆ 81464ರ ಪ್ರವೇಶಪತ್ರ ಜಾರಿ ಮಾಡಲಾಗಿತ್ತು. ಶ್ರೀ ವೀರಭದ್ರಪ್ಪ ನೋಂದಣಿ ಸಂಖ್ಯೆ 81464 ಹಾಗೂ ಶ್ರೀ ವೆಂಕಣಗೌಡ, ನೋಂದಣಿ ಸಂಖ್ಯೆ 81467 ಆಗಿದ್ದು, ಇವರು 2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಕೌಂಟ್ಸ್ ಹೈಯರ್ ವಿಷಯಕ್ಕೆ ಅಭ್ಯರ್ಥಿಗಳಾಗಿರುತ್ತಾರೆ. ನೋಂದಣಿ ಸಂಖ್ಯೆ 81464ರ ಅಭ್ಯರ್ಥಿಯ ಉತ್ತರಹಾಳೆಗಳಲ್ಲಿ ನೋಂದಣಿ ಸಂಖ್ಯೆ:81467 ಎಂಬುದಾಗಿಯೂ ನೋಂದಣಿ ಸಂಖ್ಯೆ:81467ರ ಅಭ್ಯರ್ಥಿಯ ಉತ್ತರಹಾಳೆಗಳಲ್ಲಿ ನೋಂದಣಿ ಸಂಖ್ಯೆ:61464 ಎಂಬುದಾಗಿಯೂ ಅದಲು ಬದಲು ಮಾಡಿಕೊಂಡು ಬರೆದಿರುತ್ತಾರೆ. ಆ ರೀತಿ ಮಾಡಿ ಪರೀಕ್ಷಾ ದುರಾಚಾರವೆಸಗಿರುವುರಿಂದ ಅವರುಗಳಿಗೆ ಮೇಲೆ (2)ರಲ್ಲಿ ಓದಲಾಗಿರುವಂತೆ ಹಿಂಬರಹ ನೀಡಿ ಅವರಿಂದ ಕೆಲವು ಮಾಹಿತಿ ಅವಶ್ಯವಿರುವುದರಿಂದ ಅವರಿಗೆ ಸದರಿ ಪರೀಕ್ಷೆಗೆ ಸಂಬಂಧಿಸಿದಂತೆ ಜಾರಿ ಮಾಡಿದ್ದ ಮೂಲ ಪ್ರವೇಶಪತ್ರದೊಂದಿಗೆ ದಿನಾಂಕ 17-08-2006ರಂದು ಬೆಳಿಗ್ಗೆ 11.00 ಘಂಟೆಗೆ ಖುದ್ದಾಗಿ ಸಹಾಯಕ ಕಾರ್ಯದರ್ಶಿಯವರ ಸಮ್ಮುಖದಲ್ಲಿ ಹಾಜರಾಗತಕ್ಕದ್ದು ಎಂದು ತಿಳಿಸಲಾಗಿತ್ತು. ಸದರಿಯವರು ದಿನಾಂಕ 17-8-2006ರಂದು ಸಹಾಯಕ ಕಾರ್ಯದರ್ಶಿಯವರ ಮುಂದೆ ಹಾಜರಾದ ಸಮಯದಲ್ಲಿ ನೋಂದಣಿ ಸಂಖ್ಯೆ 81464ರ ಅಭ್ಯರ್ಥಿಯಾದ ಶ್ರೀ ವೀರಭದ್ರಪ್ಪ, ಇವರು ಹೇಳಿಕೆಯಲ್ಲಿ ನೋಂದಣಿ ಸಂಖ್ಯೆಯನ್ನು ತಪ್ಪಾಗಿ ಬರೆದಿರುವುದನ್ನು ಒಪ್ಪಿಕೊಂಡಿರುತ್ತಾರೆ. ಆದರೆ ನಾಮಿನಲ್‌ರೋಲ್ ಶೀಟ್‌ನ ನೋಂದಣಿ ಸಂಖ್ಯೆ ಪಕ್ಕದಲ್ಲಿ As per Halticket ಎಂದು ಯಾರು ಬರೆದಿರುವುದು ಎಂದು ತಮಗೆ ಗೊತ್ತಿಲ್ಲವೆಂದು ತಿಳಿಸಿರುತ್ತಾರೆ. ಯಾರಿಗೂ ಅನುಕೂಲ ಮಾಡಿಕೊಡುವ ದುರದ್ದೇಶದಿಂದ ಈ ರೀತಿ ಮಾಡಿಲ್ಲ. ಪರಿಚಾರಕ ಹುದ್ದೆಯಿಂದ ದ್ವಿ.ದ.ಸ., ಹುದ್ದೆಗೆ ಬಡ್ತಿ ಪಡೆದಿದ್ದು, ಪನಃ ಪರಿಚಾರಕ ಹುದ್ದೆಗೆ ಹಿಂಬಡ್ತಿ ನೀಡುತ್ತಾರೆ ಎಂಬ ಭಯದಿಂದ ತಪ್ಪುಮಾಡಿದ್ದೇನೆ ಎಂದು ತನ್ನ ತಪ್ಪನ್ನು ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾರೆ.

ಶ್ರೀ ವೀರಭದ್ರಪ್ಪ, ಇವರು ದಿನಾಂಕ:17-08-2006ರಂದು ಅವರ ಹೇಳಿಕೆಯ ಮತ್ತು ಉತ್ತರಹಾಳೆಯಲ್ಲಿ ನಮೂದಿಸಿರುವ ನೋಂದಣಿ ಸಂಖ್ಯೆಗಳನ್ನು ಗಮನಿಸಿದರೆ ಅಭ್ಯರ್ಥಿಗಳು ನೀಡಿರುವ ಹೇಳಿಕೆಗಳು ಸಮಂಜಸವಾಗಿಲ್ಲ ಯಾವುದಾದರೂ ಒಂದು ಪತ್ರಿಕೆಯ ಹಾಳೆಯಲ್ಲಿ ಈ ರೀತಿ ತಪ್ಪಾಗಿದ್ದರೆ ಅಭ್ಯರ್ಥಿಗಳ ಹೇಳಿಕೆಯನ್ನು ಪರಿಗಣಿಸಬಹುದಾಗಿತ್ತು. ಆದರೆ ಎರಡು ಪತ್ರಿಕೆಗಳಲ್ಲೂ ಅವರುಗಳ ನೋಂದಣಿ ಸಂಖ್ಯೆಗಳನ್ನು ಅದಲು ಬದಲು ಮಾಡಿಕೊಂಡುಬರೆದಿರುವುದನ್ನು ಗಮನಿಸಿದರೆ ಅಭ್ಯರ್ಥಿಯ ಹೇಳಿಕೆ ಸಮಂಜಸವಲ್ಲವೆಂದು ಪರಿಗಣಿಸಿ ಶ್ರೀ ವೀರಭದ್ರಪ್ಪ, ರವರಿಗೆ ಆಯೋಗವು ಕರ್ನಾಟಕ ಲೋಕ ಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರ ಅನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1164-1165/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:12ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) ನಿಯಮಗಳು 1965ರನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ ಪಿಎಸ್‌ಸಿ ದಿನಾಂಕ:14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ವೀರಭದ್ರಪ್ಪ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢ ಶಾಲೆ ವಿಭಾಗ), ಹಟ್ಟಿ ಗೋಲ್ಡ್ ಮೈನ್ಸ್, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ-584115, ಇವರ 2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ಎರಡು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಹಾಜರಾಗದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ವೆಂಕನಗೌಡ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮಸ್ಕಿ, ರಾಯಚೂರು ಜಿಲ್ಲೆ ಇವರು ಎಸಗಿದ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. ಶ್ರೀ ವೆಂಕನಗೌಡ,ಇವರು 2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಸಲ್ಲಿಸಿದ ಅರ್ಜಿ ದಿನಾಂಕ: 22-03-2006.
2. ಶ್ರೀ ವೆಂಕನಗೌಡ, ಇವರಿಗೆ ಜಾರಿ ಮಾಡಿದ ಹಿಂಬರಹ ಪತ್ರ ಸಂಖ್ಯೆ:ಆರ್‌ಹೆಚ್ಎಸ್ 47/2005-06/ಪಿಎಸ್‌ಸಿ ದಿನಾಂಕ: 01-08-2006.
3. ಶ್ರೀ ವೆಂಕನಗೌಡ, ರವರ ಹೇಳಿಕೆ ದಿನಾಂಕ 17-08-2006.

**ಪ್ರಸ್ತಾವನೆ:**

2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಕೌಂಟ್ಸ್ ಹೈಯರ್ ವಿಷಯದ ಪರೀಕ್ಷೆಗೆ ಅರ್ಜಿ ಸಲ್ಲಿಸಿದ್ದ ಶ್ರೀ ವೆಂಕನಗೌಡ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮಸ್ಕಿ, ರಾಯಚೂರು ಜಿಲ್ಲೆ, ಇವರು ಅಕೌಂಟ್ಸ್ ಹೈಯರ್ ಪರೀಕ್ಷೆಗೆ ಹಾಜರಾಗಲು ನೋಂದಣಿ ಸಂಖ್ಯೆ:81467ರ ಪ್ರವೇಶಪತ್ರ ಜಾರಿ ಮಾಡಲಾಗಿತ್ತು. ಶ್ರೀ ವೆಂಕನಗೌಡ, ನೋಂದಣಿ ಸಂಖ್ಯೆ 81467 ಹಾಗೂ ಶ್ರೀ ವೀರಭದ್ರಪ್ಪ, ನೋಂದಣಿ ಸಂಖ್ಯೆ 81464 ಆಗಿದ್ದು, ಇವರು 2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಕೌಂಟ್ಸ್ ಹೈಯರ್ ವಿಷಯಕ್ಕೆ ಅಭ್ಯರ್ಥಿಗಳಾಗಿರುತ್ತಾರೆ. ನೋಂದಣಿ ಸಂಖ್ಯೆ 81467ರ ಅಭ್ಯರ್ಥಿಯ ಉತ್ತರಹಾಳೆಗಳಲ್ಲಿ ನೋಂದಣಿ ಸಂಖ್ಯೆ:81464 ಎಂಬುದಾಗಿಯೂ ನೋಂದಣಿ ಸಂಖ್ಯೆ 81464ರ ಅಭ್ಯರ್ಥಿಯ ಉತ್ತರಹಾಳೆಗಳಲ್ಲಿ ನೋಂದಣಿ ಸಂಖ್ಯೆ:61467 ಎಂಬುದಾಗಿಯೂ ಅದಲು ಬದಲು ಮಾಡಿಕೊಂಡು ಬರೆದಿರುತ್ತಾರೆ. ಆ ರೀತಿ ಮಾಡಿ ಪರೀಕ್ಷಾ ದುರಾಚಾರವೆಸಗಿರುವುರಿಂದ ಅವರುಗಳಿಗೆ ಮೇಲೆ (2)ರಲ್ಲಿ ಓದಲಾಗಿರುವಂತೆ ಹಿಂಬರಹ ನೀಡಿ ಅವರಿಂದ ಕೆಲವು ಮಾಹಿತಿ ಅವಶ್ಯವಿರುವುದರಿಂದ ಅವರಿಗೆ ಸದರಿ ಪರೀಕ್ಷೆಗೆ ಸಂಬಂಧಿಸಿದಂತೆ ಜಾರಿ ಮಾಡಿದ್ದ ಮೂಲ ಪ್ರವೇಶಪತ್ರದೊಂದಿಗೆ ದಿನಾಂಕ:17-08-2006ರಂದು ಬೆಳಿಗ್ಗೆ 11.00 ಘಂಟೆಗೆ ಖುದ್ದಾಗಿ ಸಹಾಯಕ ಕಾರ್ಯದರ್ಶಿಯವರ ಸಮ್ಮುಖದಲ್ಲಿ ಹಾಜರಾಗತಕ್ಕದ್ದು ಎಂದು ತಿಳಿಸಲಾಗಿತ್ತು. ಸದರಿಯವರು ದಿನಾಂಕ 17-8-2006ರಂದು ಸಹಾಯಕ ಕಾರ್ಯದರ್ಶಿಯವರ ಮುಂದೆ ಹಾಜರಾದ ಸಮಯದಲ್ಲಿ ನೋಂದಣಿ ಸಂಖ್ಯೆ 81467ರ ಅಭ್ಯರ್ಥಿಯಾದ ಶ್ರೀ ವೆಂಕನಗೌಡ, ಅವರ ಎರಡು ಉತ್ತರಪತ್ರಿಕೆಗಳನ್ನು ಅವರಿಗೆ ತೋರಿಸಿದ್ದು ಆ ಎರಡುಉತ್ತರಪತ್ರಿಕೆಗಳು ಅವರದ್ದೆ ಎಂದು ಒಪ್ಪಿಕೊಂಡಿರುತ್ತಾರೆ. ನಂತರ ಪ್ರವೇಶಪತ್ರದಲ್ಲಿರುವ ನೋಂದಣಿ ಸಂಖ್ಯೆ 81467ನ್ನು ಉತ್ತರಪತ್ರಿಕೆಯಲ್ಲಿ ನಮೂದಿಸದೆ ನೋಂದಣಿ ಸಂಖ್ಯೆ 81464 ಎಂದು ಹೇಗೆ ಬರೆದಿರುತ್ತೀರಿ ಎಂದು ಕೇಳಿದ್ದಕ್ಕೆ ಅದಕ್ಕೆ ಅವರು ನನಗೆ ಅದೇ ಸಮಯದಲ್ಲಿ ಇಲಾಖೆಯವರು ನನಗೆ ಹಿಂಬಡ್ತಿ ನೀಡಿದ ಕಾರಣ ಮಾನಸಿಕವಾಗಿ ಅಸ್ವಸ್ಥಗೊಂಡಿದ್ದು, ಪರೀಕ್ಷೆಯಲ್ಲಿ ಏನು ಬರೆದಿರುವೇ ಎಂಬ ಪರಿಜ್ಞಾನವಿಲ್ಲದಂತೆಯಾಗಿ ಈ ರೀತಿ ತಪ್ಪಾಗಿ ನೋಂದಣಿ ಸಂಖ್ಯೆ ಬರೆದಿರುತ್ತೇನೆ. ಅವರು ಯಾರಿಗೂ ಅನುಕೂಲ ಮಾಡಿಕೊಡುವ ದುರುದ್ದೇಶದಿಂದ ಈ ರೀತಿ ಮಾಡಿಲ್ಲ. ನೋಂದಣಿ ಸಂಖ್ಯೆ ತಪ್ಪಾಗಿ ಬರೆದಿರುವುದು ಅವರು ತಪ್ಪನ್ನು ಸ್ಪಷ್ಟವಾಗಿ ಒಪ್ಪಿಕೊಂಡಿರುತ್ತಾರೆ.

ಶ್ರೀ ವೆಂಕನಗೌಡ ಇವರು ದಿನಾಂಕ 17-08-2006ರಂದು ಅವರ ಹೇಳಿಕೆಯ ಮತ್ತು ಉತ್ತರಹಾಳೆಯಲ್ಲಿ ನಮೂದಿಸಿರುವ ನೋಂದಣಿ ಸಂಖ್ಯೆಗಳನ್ನು ಗಮನಿಸಿದರೆ ಅಭ್ಯರ್ಥಿಗಳು ನೀಡಿರುವ ಹೇಳಿಕೆಗಳು ಸಮಂಜಸವಾಗಿಲ್ಲ ಯಾವುದಾದರೂ ಒಂದು ಪತ್ರಿಕೆಯ ಹಾಳೆಯಲ್ಲಿ ಈ ರೀತಿ ತಪ್ಪಾಗಿದ್ದರೆ ಅಭ್ಯರ್ಥಿಗಳ ಹೇಳಿಕೆಯನ್ನು ಪರಿಗಣಿಸಬಹುದಾಗಿತ್ತು. ಆದರೆ ಎರಡು ಪತ್ರಿಕೆಗಳಲ್ಲೂ ಅವರುಗಳ ನೋಂದಣಿ ಸಂಖ್ಯೆಗಳನ್ನು ಅದಲು ಬದಲು ಮಾಡಿಕೊಂಡುಬರೆದಿರುವುದನ್ನು ಗಮನಿಸಿದರೆ ಅಭ್ಯರ್ಥಿಯ ಹೇಳಿಕೆ ಸಮಂಜಸವಲ್ಲವೆಂದು ಪರಿಗಣಿಸಿ ಶ್ರೀ ವೆಂಕನಗೌಡ ರವರಿಗೆ ಆಯೋಗವು ಕರ್ನಾಟಕ ಲೋಕ ಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರ ಅನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1164-65/2006-07/ಪಿಎಸ್‌ಸಿ, ಬೆಂಗಳೂರು, ದಿನಾಂಕ:12ನೇ ಡಿಸೆಂಬರ್, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ:ಆಡಳಿತ.398/93-94/ಪಿಎಸ್‌ಸಿ ದಿನಾಂಕ:14-09-1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ವೆಂಕನಗೌಡ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮಸ್ಕಿ, ರಾಯಚೂರು ಜಿಲ್ಲೆ, ಇವರ 2006ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ಎರಡು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಹಾಜರಾಗದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ:** 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳಲ್ಲಿ ದುರಾಚಾರವೆಸಗಿರುವ ಆರೋಪಕ್ಕೆ ಸಂಬಂಧಿಸಿದ ಅಭ್ಯರ್ಥಿಗಳಾದ ಶ್ರೀ ಎಂ ನಾಗರಾಜು,ಕಛೇರಿ ಅಧೀಕ್ಷಕರು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಮತ್ತು ಶ್ರೀ ಶಿವಶಂಕರಪ್ಪ, ಮೇಲ್ವಿಚಾರಕರು, ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ, ಮದ್ದೂರು, ಮಂಡ್ಯ ಜಿಲ್ಲೆ ಹಾಗೂ ಶ್ರಿ ಹೆಚ್. ಸಿ. ಕಾಳೀಪ್ರಸಾದ್, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು, ಮದ್ದೂರು ತಾಲ್ಲುಕು, ಮಂಡ್ಯ ಜಿಲ್ಲೆ ಇವರು ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1. 2004ನೇ ಸಾಲಿನ ಪ್ರಥಮ ಅಧಿವೇಶನದ ಶ್ರೀ ಶಿವಶಂಕರಪ್ಪ ನೋಂದಣಿ ಸಂಖ್ಯೆ.70714 ಇವರ ಅರ್ಜಿ ದಿನಾಂಕ 13-05-2004.
2. ಶ್ರೀ ಶಿವಶಂಕರಪ್ಪ ಇವರಿಗೆ ಕಾರಣ ಕೇಳುವ ನೋಟೀಸು ಸಂಖ್ಯೆ ಇಪ(2)23/2006-07/ಪಿಎಸ್‌ಸಿ ದಿನಾಂಕ: 18-04-2006.
3. ಶ್ರೀ ಎಂ. ನಾಗರಾಜ, ಇವರಿಗೆ ಕಾರಣ ಕೇಳುವ ನೋಟೀಸು ಸಂಖ್ಯೆ: ಇಪ(2)23/2006-07/ಪಿಎಸ್‌ಸಿ ದಿನಾಂಕ: 18-04-2006.
4. ಶ್ರೀ ಹೆಚ್.ಸಿ. ಕಾಳೀಪ್ರಸಾದ್, ಇವರಿಗೆ ಕಾರಣ ಕೇಳುವ ನೋಟೀಸು ಸಂಖ್ಯೆ.ಇಪ(2)23/2006-07/ಪಿಎಸ್‌ಸಿ ದಿನಾಂಕ: 18-04-2006.
5. ಶ್ರೀ ಶಿವಶಂಕರಪ್ಪ, ಇವರ ದಿನಾಂಕ: 29-06-2006ರ ಹೇಳಿಕೆ. ಶ್ರೀ ಎಂ. ನಾಗರಾಜ, ಇವರ ದಿನಾಂಕ:29-06-2006ರ ಹೇಳಿಕೆ. ಶ್ರೀ ಹೆಚ್.ಸಿ.ಕಾಳೀಪ್ರಸಾದ್, ಇವರ ದಿನಾಂಕ:29-06-2006ರ ಹೇಳಿಕೆ.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಮಂಡ್ಯ ಕೇಂದ್ರದಿಂದ ನೋಂದಣಿ ಸಂಖ್ಯೆ:70714ರ ಮೇರೆಗೆ ಅಭ್ಯರ್ಥಿಯಾಗಿದ್ದ ಶ್ರೀ ಶಿವಶಂಕರಪ್ಪ, ಮೇಲ್ವಿಚಾರಕರು, ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಇವರು ಅಕೌಂಟ್ಸ್ ಹೈಯರ್, ರೆವಿನ್ಯೂ ಹೈಯರ್ ಭಾಗ-1 ಮತ್ತು ರೆವಿನ್ಯೂ ಹೈಯರ್ ಭಾಗ-2ರ ವಿಷಯಗಳಿಗೆ ಸಲ್ಲಿಸಿದ್ದ ಅರ್ಜಿಯಲ್ಲಿ ಅವರ ಭಾವಚಿತ್ರವನ್ನು ಅಂಟಿಸಿ ಅದಕ್ಕೆ ಮೇಲಧಿಕಾರಿಯಿಂದ ದೃಢೀಕರಣ ಪಡೆದು ಸಲ್ಲಿಸಿದ್ದು, ಮತ್ತೊಬ್ಬ ಅಭ್ಯರ್ಥಿಯಾದ ಎಂ.ನಾಗರಾಜ ರವರು ಅವರ ಬದಲಿಗೆ ಪರೀಕ್ಷೆಯನ್ನು ಬರೆಯಲು ಅವಕಾಶ ಮಾಡಿಕೊಟ್ಟು ದುರಾಚಾರ ಎಸಗಿರುವ ಬಗ್ಗೆ ಆಯೋಗದ ಗಮನಕ್ಕೆ ಬಂದಿರುತ್ತದೆ ಹಾಗೂ ಸದರಿ ಪರೀಕ್ಷೆಗೆ ಅಭ್ಯರ್ಥಿಯಾಗಿದ್ದ ಶ್ರೀ ಎಂ.ನಾಗರಾಜ ರವರು ಶ್ರಿ ಶಿವಶಂಕರಪ್ಪ ಅವರ ಅರ್ಜಿಯಲ್ಲಿ ತಮ್ಮ ಭಾವಚಿತ್ರವನ್ನು ಅಂಟಿಸಲು ಅನುವು ಮಾಡಿಕೊಟ್ಟು ಅವರ ಬದಲಿಗೆ ಪರೀಕ್ಷೆಯನ್ನು ಬರೆದಿರುವ ಮೂಲಕ ದುರಾಚಾರ ಎಸಗಿರುತ್ತಾರೆ. ಮೇಲಧಿಕಾರಿಯಾದ ಶ್ರೀ ಹೆಚ್.ಸಿ.ಕಾಳಿಪ್ರಸಾದ್, ಎಂಬುವರು ಇವರ ಅರ್ಜಿಗಳನ್ನು ಪರಿಶೀಲಿಸಿ ದೃಢೀಕರಿಸುವ ಸಂದರ್ಭದಲ್ಲಿ ಈ ಲೋಪವನ್ನು ಸರಿಯಾಗಿ ಪರಿಶೀಲಿಸದೆ ಅದಲು ಬದಲು ಮಾಡಿದ ಭಾವಚಿತ್ರವನ್ನು ದೃಢೀಕರಿಸುವ ಮೂಲಕ ಈ ದುರಾಚಾರಕ್ಕೆ ಕುಮ್ಮಕ್ಕು ನೀಡಿ ಅದರಲ್ಲಿ ಭಾಗಿಯಾಗಿರುವುದು ವ್ಯಕ್ತವಾಗಿರುತ್ತದೆ. ಸದರಿ ಮೂವರು ಆಪಾದಿತರು ಅವರುಗಳ ವಿರುದ್ಧ ಮಾಡಲಾದ ಆರೋಪವನ್ನು ನಿರಾಕರಿಸಿರುವ ಹಿನ್ನೆಲೆಯಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ಆಯೋಗದ ಸಹಾಯಕ ಕಾರ್ಯದರ್ಶಿಗಳಾದ ಶ್ರೀ ಡಿ.ಜಯರಾಮಯ್ಯ, ಅವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಕೆ.ವೆಂಕಟೇಶ್, ಹಿರಿಯ ಸಹಾಯಕರು ಅವರನ್ನು ಆಭೀಯೊಕ್ತ ಅಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯ ವಿಚಾರಣೆ ನಡೆಸಿ ದಿನಾಂಕ:06-11-2006ರಂದು ವಿಚಾರಣಾ ವರದಿಯನ್ನು ಆಯೋಗಕ್ಕೆ ಮಂಡಿಸಿರುತ್ತಾರೆ.

ವಿಚಾರಣಾ ಸಮಯದಲ್ಲಿ ಆಯೋಗದಿಂದ ಮಂಡ್ಯ ಜಿಲ್ಲೆಯಲ್ಲಿ ನಡೆಸಲಾದ ಇಲಾಖಾ ಪರೀಕ್ಷೆ 2004ರ ಪ್ರಥಮ ಅಧಿವೇಶನದ ಅಕೌಂಟ್ಸ್ ಹೈಯರ್, ರೆವಿನ್ಯೂ ಹೈಯರ್ ಭಾಗ-1 ಹಾಗೂ ಭಾಗ-2 ವಿಷಯಗಳಿಗೆ ಅಭ್ಯರ್ಥಿಯಾದ ಶ್ರೀ ಶಿವಶಂಕರಪ್ಪ, ವಸತಿ ನಿಲಯ ಮೇಲ್ವಿಚಾರಕರು, ಇವರ ಬದಲು ಶ್ರೀ ಎಂ.ನಾಗರಾಜ, ಕಛೇರಿ ಆಧೀಕ್ಷಕರು, ಇವರೇ ಪರೀಕ್ಷೆ

